★ ಸನ್ಮಾರ್ಗ ಗ್ರಂಥಭಾಂಡಾರದ ಪುಸ್ತಕ ಮಾಲೆ, ವಿಜಯಪುರ ೫ ನೇ ಹೂ ★

# ಅಕ್ಕನ ಅಚ್ಚ ಬಾಳು.



ಕರ್ತರು:

ಶ್ರೀ ನಿಡುಮಾಮಿಡಿ ಶ್ರೀ ಗಿರಿರಾಜ ಮಣಿಖಚಿತ ಕನಕ
ಸೂರ್ಯ ಸಿಂಹಾಸನಾಧೀಶ್ವರರಾದ

**ಶ್ರೀ ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯರು.**



ಪ್ರಕಾಶಕರು:

**'ತ್ಯಾಗವೀರ'**

**ಶ್ರೀ. ಶಿ. ಶಿ. ಚಿತ್ತರಗಿ (ನಾಲತವಾಡ)**

೧೯೫೩ ] **ವಿಜಾಪೂರ.** [ ಬೆಲೆ. ೧-೦-೦

ಪ್ರಕಾಶಕರು:
" ತ್ಯಾಗವೀರ"
ಶ್ರೀ ಶಿವಶಂಕರಪ್ಪ ಶಿವಲಿಂಗಪ್ಪ ಚಿತ್ತರಗಿ,
ವಿಜಾಪೂರ.



ಮುದ್ರಕರು:
ಸಿ. ಎಮ್. ಸಕ್ರೋಜಿ, ಬಿ. ಎ. (ಆನರ್ಸ).
ದಿ ಸಕ್ರೋಜಿ ಪ್ರಿಂಟಿಂಗ ವರ್ಕ್ಸ್,
ಬಾಗಲಕೋಟ.

# ವಿಷಯಾನುಕ್ರಮಣಿಕೆ

ಶ್ರೀ ಪಂಡಿತಾರಾಧ್ಯ ಪ್ರಸೀದ
ಶ್ರೀಮದ್ವೇದ ವೇದಾಂತಾಗಮ ಭಾಷ್ಯ ಪ್ರತಿಪಾದಿತ ವಿಮಲ ವೀರಶೈವ
ಶಕ್ತಿವಿಶಿಷ್ಟಾದ್ವೈತ ಮಹಾಮತಸ್ಥಾಪನಾಚಾರ್ಯವರ್ಯ
ಶ್ರೀ ೧೦೦೮ ಶ್ರೀಮಜ್ಜಗದ್ಗುರು ಪಂಡಿತಾಚಾರ್ಯ ಪರಂಪರಾಗತ
ಶ್ರೀ ಗಿರಿರಾಜ ಮಣಿಖಚಿತ ಕನಕ ಸೂರ್ಯಸಿಂಹಾಸನಾಧೀಶ್ವರ



[Sakroji P. Bagalkot.]

ಶ್ರೀಮನ್ನಿಡುಮಾಮಿಡಿ ಶ್ರೀಶೈಲ
**ಶ್ರೀ. ಜ. ಪ. ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯರ,**
ಮುಕ್ಕಾಮು:- **ಗೂಳೂರು.**

## ಶ್ರೀ ಮ. ನಿ. ಮಹಾದೇವಸ್ವಾಮಿಗಳವರ

# ಮುಚ್ಚೋಲೆ.

ಓದುಗರೆ! 'ಅಕ್ಕನ ಬಾಳು' ಎಂಬ ಹೆಸರನ್ನೋದಿ ಕುತೂಹಲ ದಿಂದ ಮೊದಲು ಕೈಯಲ್ಲಿ ತೆಗೆದುಕೊಂಡು, ಒಂದೆರಡು ಪಂಕ್ತಿಗಳನ್ನು ಓದಲಾರಂಭಿಸಿದೊಡನೆ ಆಧ್ಯಾತ್ಮಿಕ ಜೀವನದ ವಿಚಾರವನ್ನು ಕಂಡು, ಒಮ್ಮೆಲೆ ಇದೇನು ಹಾಳು ಆಧ್ಯಾತ್ಮ ಜೀವನ ? ಎಂದು ಉಸುರೆಳೆದು-ಮುಖವುರಿದು ಕೆಳಗಿರಿಸಿ ಬಿಡಬೇಡಿರಿ. ಆಧ್ಯಾತ್ಮಿಕದ ಬಾಳಿಂದು ಆರಂಭಿಸಿದ್ದರೂ ಗ್ರಂಥವೆಲ್ಲ ವೇದಾಂತದ ಜಟಿಲ ಮಾತುಗಳಿಂದ ತುಂಬಿ ಕೊಂಡಿಲ್ಲ. ಹುಟ್ಟು-ಬೆಳವಣಿಗೆಗಳ ಪ್ರಕರಣಗಳನ್ನು ದಾಟಿ ಮದು ವೆಯ ಪ್ರಕರಣಕ್ಕೆ ಬಂದೊಡನೆ ಇದೇನು ಆಧ್ಯಾತ್ಮಿಕ ಗ್ರಂಥವೋ ಅಥವಾ ಸರಸವಾದ ಸರಳವಾದ ಲಲಿತ ಗ್ರಂಥವೋ ಎಂದೆನ್ನುವಷ್ಟು ಸುಂದರವಾಗಿ ಓದುಗರಿಗೆ ಓದುವ ಉತ್ಸಾಹವು ಹುಟ್ಟುವಂತೆ ಲೇಖಕರು ಗ್ರಂಥವನ್ನು ಬರೆದಿದ್ದಾರೆ. ಅಕ್ಕನ ವಚನವು ಆಧ್ಯಾತ್ಮಿಕವಾಗಿದ್ದರೂ ಹೇಗೆ ರುಚಿಕಟ್ಟಾಗಿದೆಯೋ ಹಾಗೆ ಅದರ ಉದರದಿಂದ ಜನಿಸಿದ ಇವರ ಗ್ರಂಥವೂ ರುಚಿಕಟ್ಟಾಗಿದೆ. ಶೈಲಿಯು ಸವಿಯಾಗಿ ಸರಳಾಗಿ ಓಡುತ್ತದೆ. ವಚನಗಳನ್ನು ಸನ್ನಿವೇಶಕ್ಕೆ ತಕ್ಕಂತೆ ಆಯ್ದು ಜೋಡಿಸಿದ ಇವರ ಚಾತುರ್ಯವು ಹೆಚ್ಚು ಮೆಚ್ಚತಕ್ಕುದಾಗಿದೆ. ಅಕ್ಕನ ಬಾಳು-ಬಟ್ಟೆ-ಭಾಷೆಗಳನ್ನು ಯಾವ ದೃಷ್ಟಿಯಿಂದ ದಿಟ್ಟಿಸಬೇಕೆಂಬುದನ್ನು ಒಳ್ಳೇ ಯುಕ್ತಿಯುಕ್ತವಾಗಿ ಎತ್ತಿ ತೋರಿಸಿದ್ದಾರೆ. ಅಕ್ಕನಂತಹ ಆಧ್ಯಾತ್ಮಿಕ ಸೌಂದರ್ಯವನ್ನು ಕಂಡುಂಡು ನಲಿಯಲು ಒಳಗಣ್ಣು ಅವಶ್ಯವಾಗಿ ಬೇಕೆಂಬುದನ್ನು ಚಿತ್ತಾಕರ್ಷಕವಾಗಿ ಚಿತ್ರಿಸಿದ್ದಾರೆ. ಅಲ್ಲಲ್ಲಿ ಐತಿಹಾಸಿಕ ಕುರುಹುಗಳನ್ನು ಅಡಿಟಿಪ್ಪಣಿಯಲ್ಲಿ ಸೂಚಿಸಿದ್ದಾರೆ.

ಅವುಗಳಲ್ಲಿ ನೀಲಾಂಬೆಯ ವಿಚಾರ, ಅಕ್ಕನ ಗುರುವಿನ ವಿಚಾರ ಬಹು ಪ್ರಾಮುಖ್ಯವಾದವು. 'ಅಕ್ಕನ ಬಾಳು' ಒಳ್ಳೇ ಆಳವಾದುದು, ಅಗಾಧವಾದುದು. ಅದು ಅಳತೆಗೋಲಿಗೆ ಅಟುಕುವಂತಹದಲ್ಲ. ಆದರೂ ಗ್ರಂಥಕಾರರು ಅಟುಕಿಸಲು ಯತ್ನಿಸಿದ್ದಾರೆ. ಯಶಸ್ವಿಗಳಾಗಿದ್ದಾರೆ. **ಒಟ್ಟಿನಲ್ಲಿ ಅಕ್ಕನ ವಿಚಾರದಲ್ಲಿ ಇದೊಂದು ವಿಶಿಷ್ಟಬಗೆಯ ಗ್ರಂಥವಾಗಿದೆ.** ಇದು ಅವಶ್ಯವಾಗಿ ಎಲ್ಲರಿಂದಲೂ ಓದಲರ್ಹವಾಗಿದೆ ಎಂದು ಹೇಳದಿರಲಾರೆವು. ಈ ನೂತನ ಲೇಖಕರು ಇಂತಹ ಗ್ರಂಥಗಳನ್ನು ಇನ್ನೂ ಹೆಚ್ಚು ಹೆಚ್ಚಾಗಿ ಬರೆದು ಸಾಹಿತ್ಯ ಸೇವೆಯನ್ನು ಸಾಕಷ್ಟು ಮಾಡಲೆಂದು ಹಾರೈಸುತ್ತೇವೆ. ಇದರಂತೆ ಇನ್ನುಳಿದ ನಮ್ಮ ನೂತನ ತರುಣ ಲೇಖಕರು ಶರಣ-ಶರಣೆಯರ ವಿಚಾರವಾಗಿ ಸಂಶೋಧನಾತ್ಮಕವಾದ ಗ್ರಂಥಗಳನ್ನು ಬರೆದು ಬೆಳಕಿಗೆ ಬರುವುದು ಒಳಿತಾದುದಲ್ಲವೆ?

ಬೆಂಗಳೂರು
ತಾ. ೧೫-೮-೩೯

**ಶ್ರೀ ಮಹಾದೇವಸ್ವಾಮಿಗಳು,**
ಶ್ರೀ ಸರ್ಪಭೂಷಣಮಠ.



# ಮುನ್ನುಡಿ.



( ಅಕ್ಕನದೊಂದು ಪ್ರೇಮಮಯ ಜೀವನ. ಸತಿ-ಪತಿಗಳ ಶೃಂಗಾರವು 'ಅನುರಾಗ'ವೆಂದೂ ಬಂಧು-ಬಾಂಧವರ ಮಮತೆಯು 'ಪ್ರೀತಿ'ಯೆಂದೂ, ಗುರು-ಹಿರಿಯರ ಸಂಬಂಧವು 'ಭಕ್ತಿ'ಯೆಂದೂ ಪರಿಗಣಿತವಾಗಿದೆ. ಆದರೆ 'ಪ್ರೇಮ'ವೆಂಬುದು ಬಹು ವ್ಯಾಪ್ತವಾದ ಪದ. ಆಧ್ಯಾತ್ಮಿಕ ದೃಷ್ಟಿಯಿಂದ ಭಕ್ತಿಗಿಂತ ಹಿರಿದಲ್ಲ. ಜೀವನದ ಚರಮ ಧ್ಯೇಯಗಳನ್ನು ಸಾಧಿಸುವಾಗಲೂ ಸಹ ಅದಕ್ಕಿಂತಲೂ ಮಿಗಿಲಾದ ಅವಲಂಬನವಿಲ್ಲ; ಅದಕ್ಕಿಂತ ಮೋಹಕವಾದ ಸಂಪತ್ತಿಲ್ಲ. ಆದರೂ ರಾಧೆಯ ಮಧುರಾ ಭಕ್ತಿಯು ಆದರ್ಶಪ್ರೇಮದಲ್ಲೇ ಕೂಡಿಹೋಗಿದೆ. ವಿಶ್ವದ ಚೈತನ್ಯರೂಪನಾದ ಪರಮಾತ್ಮನನ್ನು ಆರಾಧಿಸಿ, ಆತನ ಸೌಂದರ್ಯ ಮತ್ತು ಆತನ ಜೀವಗಳಲ್ಲಿ ತನ್ಮಯಳಾಗಿ ಇಡೀ ವಿಶ್ವವನ್ನೇ ಭಾವೋನ್ಮಾದದಿಂದ ಆಲಂಗಿಸುವ ಮಹದ್ವ್ಯಕ್ತಿಯ ಜೀವನವು ಪ್ರೇಮಮಯವೇ ಭಕ್ತಿಮಯವೇ ಎಂದು ಯಾರೂ ಹೋರಾಡಬೇಕಾಗಿಲ್ಲ. ತನ್ನ ಹೃದಯ ವೇದನೆಯಿಂದ ಹೊರಬೀಳುವ ಕಣ್ಣೀರಿನ ಪ್ರತಿಕಣದಲ್ಲು, ನಿಟ್ಟುಸಿರಿನ ಮರೆಯಲ್ಲು, ಜೀವದೇಹಾದ್ಯಂತವಾದ ಆವೇಗ-ಆವೇಶಗಳಲ್ಲು, ಯಾರು ಪರಮಾತ್ಮನ ರೂಪು, ನಡೆ-ನುಡಿಗಳ ಸಾಕ್ಷಾತ್ಕಾರವನ್ನು ಅನುಭವಿಸುವರೋ ಅವರು ಧನ್ಯರೇ ಸರಿ. ಅವರ ಜೀವನವು ಭವ್ಯವೂ ಅಹುದು; ದಿವ್ಯವೂ ಅಹುದು. ಅಕ್ಕನ ಜೀವನವು ಇಂತಹ ಅನುಭವದ ಪರಾಕಾಷ್ಠದೆಶೆಯಲ್ಲಿರುತ್ತದೆ. )

ಅಕ್ಕನೂ ಸಹ ಸಂಸಾರಿಗಳು. ತನಗೂ ಒಂದು ಮನೆ, ಒಬ್ಬ ಪತಿ, ಒಂದು ಜೀವನ ಇರಬೇಕೆಂದು ಹೋರಾಡಿ ಸಂಪಾದಿಸಿದವಳು. ಈ ಸಂಪಾದನೆಗಾಗಿ ತನ್ನದೆಂಬುದೆಲ್ಲವನ್ನು ಅವನದಾಗಿ ಮಾಡಿದಳು. ಆದರೆ ಈ ಅರ್ಪಣ, ಈ ಜೀವನ, ಈ ಸಂಸಾರ, ಈ ಮನೆ, ಈ ಪತಿ

ಇವು ವಿಶೇಷವಾಗಿ ಅರ್ಥಗರ್ಭಿತವಾದ ಪದಗಳು ಈ ಪದಗಳಿಗೆ ಈ ಪುಸ್ತಕದಲ್ಲಿ ಬೇರೊಂದು ಅರ್ಥವಿದೆ.

(ಮೇಲಿನ ಪ್ರೇಮ ಮತ್ತು ಸಂಸಾರಗಳೊಂದಿಗೆ ಆಕೆಗೆ 'ಪ್ರತಿಭೆ' ಇದ್ದಿತು. ಸಾಧಾರಣ ವಸ್ತುಗಳಲ್ಲಿ ಅಸಾಧಾರಣತೆಯನ್ನು ಕಂಡು, ಆ ಅಸಾಧಾರಣತೆಯಲ್ಲಿ ಅಸದೃಶ ಸೌಂದರ್ಯವನ್ನು ಅನುಭವಿಸಿ, ಪ್ರಪಂಚಕ್ಕೊಂದು ಹೊಸರೂಪನ್ನು ಕೊಟ್ಟುದು ಆಕೆಯ ಜೀವನ. ಈ ತ್ರಿವೇಣೀ ಸಂಗಮದಲ್ಲಿ ಅಕ್ಕನ ಜೀವನವು ಎಷ್ಟು ಭವ್ಯವಾಗಿ ತೋರುತ್ತದೆಂಬುವದಕ್ಕೆ ಬೇರೆ ನಿದರ್ಶನ ಬೇಕಿಲ್ಲ. )

( ಶ್ರೀಶೈಲದ ದುರ್ಗಮ ಪರ್ವತಾರಣ್ಯಗಳನ್ನು ಏಕಾಂಗಿಯಾಗಿ ಸಂಚರಿಸುತ್ತಿರುವ ಅಕ್ಕನ ಚಿತ್ರವನ್ನು ತುಸು ನೆನಪಿಗೆ ತಂದುಕೊಳ್ಳಿ ! ಪ್ರಶಾಂತವಾದ ಅರಣ್ಯ-ಪರ್ವತಗಳು, ಗಗನವನ್ನು ಮುಟ್ಟುವ ಮರ-ಗಿಡಗಳು, ವಸಂತಋತುವಿನ ನವಶೋಭೆಯಿಂದ ಸೌಂದರ್ಯವನ್ನು ಸೂಸುತ್ತಿರುವ ಹೊಸ ಚಿಗುರು, ಅರಳಿದ ಹೂವು, ಹರಿವ ತೊರೆ, ಕುಣಿವ ಹಕ್ಕಿ, ನಿಸರ್ಗ ಸೌಂದರ್ಯದ ಲೀಲಾಭೂಮಿಯಾಗಿ ವಾತಾವರಣವು ನರ್ತಿಸುತ್ತಿದೆ. ಆ ಸೌಂದರ್ಯದ ಹಿಂದಿರುವ ಪರಮ ಸೌಂದರ್ಯಮಯನಾದ 'ಚನ್ನಮಲ್ಲಿಕಾರ್ಜುನ'ನನ್ನು ಅರಿಸಿ ಬರುತ್ತಿರುವ ಕೇವಲ ಹದಿನೈದು–ಹದಿನಾರು ವರುಷದ ಬಾಲೆ. ಅರಮನೆ–ಅಷ್ಟೈಶ್ವರ್ಯಗಳ ಭೋಗ–ಅಂತಃಪುರದ ವಿಲಾಸಮಯ ಜೀವನ ಇವುಗಳನ್ನು ತೃಣೀಕರಿಸಿ ಕಲ್ಲು-ಮುಳ್ಳೆನ್ನದೆ, ಬಿಸಿಲು-ನೆರಳೆನ್ನದೆ, ಸುಖ-ದುಃಖವೆನ್ನದೆ, ಹಸಿವು-ಬಾಯಾರಿಕೆಯೆನ್ನದೆ ತನ್ನನ್ನು ತಾನೇ ಮರೆತು, ಹೃದಯದ ಎಲ್ಲ ವ್ಯಥೆ, ದುಃಖ, ಪ್ರೀತಿ, ಕಾತುರತೆ, ಹಂಬಲಿಕೆಗಳನ್ನು ತೋರಸೂಸಿ –

"ಅಳಿಸಂಕುಳವೆ, ಮಾಮರವೆ,...ಕೋಗಿಲೆಯೆ ನಿಮ್ಮ ನೆಲ್ಲರನು ಒಂದು ಬೇಡುವೆನು. ಎನ್ನೊಡೆಯ ಚನ್ನಮಲ್ಲಿಕಾರ್ಜುನದೇವರ ಕಂಡರೆ ಕರೆದು ತೋರಿರೆ ?" )

# ಐದು

"ಚಿಲಿಮಿಲಿಯೆಂದೋದುವ ಗಿಳಿಗಳಿರಾ ನೀವು ಕಾಣಿರೆ, ನೀವು ಕಾಣಿರೆ?
ಸರವೆತ್ತಿ ಪಾಡುವ ಕೋಗಿಲೆಗಳಿರಾ ನೀವು ಕಾಣಿರೆ, ನೀವು ಕಾಣಿರೆ ?
ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೆ, ನೀವು ಕಾಣಿರೆ ?
ಕೊಳನ ತಡಿಯೊಳಾಡುವ ಹಂಸಗಳಿರಾ ನೀವು ಕಾಣಿರೆ, ನೀವು ಕಾಣಿರೆ?
ಗಿರಿಗಹ್ವರದೊಳಗಾಡುವ ನವಿಲುಗಳಿರಾ ನೀವು ಕಾಣಿರೆ, ನೀವು ಕಾಣಿರೆ?..."

ಎಂದು ಮರದಿಂದ ಮರವೆಡೆಗೆ, ಗಿಡದಿಂದ ಗಿಡವೆಡೆಗೆ, ಹಕ್ಕಿಯಿಂದ ಹಕ್ಕಿಯೆಡೆಗೆ ಉನ್ಮಾದಿನಿಯಂತೆ ಓಡುತ್ತಿರುವ ಈ ಬಾಲಿಕೆಯ ಕೂಗು ಹತ್ತು ದಿಕ್ಕುಗಳಲ್ಲಿ 'ನೀವು ಕಾಣಿರೆ ನೀವು ಕಾಣಿರೆ?' ಎಂದು ಪ್ರತಿಧ್ವನಿಗೊಳ್ಳುತ್ತಿದೆ. ಮೂಕವಾಗಿದೆ ಜಗತ್ತು. ಪ್ರತಿಯೊಬ್ಬ ಆಧ್ಯಾತ್ಮಿಕವಾದಿಯ ಮನೋಮಂದಿರದಿಂದಲೂ ಮೊಳಗಿ ಹೊರಬೀಳುವ ಕರುಣಾಜನಕವಾದ ವಾಣಿಯಿದು. ಇದು ಧಾರ್ಮಿಕ ಸಂಸ್ಕೃತಿಯ ಹೃದಯ ವೇದನೆ. ಪ್ರಶಾಂತ ಪ್ರಕೃತಿಯ ಗರ್ಭದಿಂದ ಮನುಷ್ಯನ ಹೃದಯದ ಮೂಲಕ ಹೊರಡತಕ್ಕ ಆರ್ತನಾದ ಇದು ಅಕ್ಕನೊಬ್ಬಳ ವಾಣಿಯಲ್ಲ! ಯುಗ ಯುಗಾಂತರದಿಂದ ಜೀವದ ಜಂಜಡದಲ್ಲಿ ಸಿಲ್ಕಿ ಹೋರಾಡಿ ಬೇಸತ್ತು ಬೇಗುದಿಗೊಂಡು, ಇರುಳ ಕಾಳ ಕತ್ತಲೆಯಲ್ಲಿ ದಾರಿಗಾಣದ ಅನಂತಕೋಟಿ ಜೀವಿಗಳೂ ಭಕ್ತಿಯ ಬೆಳಕನ್ನು ಕಂಡಾಗ, ಸೌಂದರ್ಯದ ಅನುಭವವನ್ನು ಹೊಂದಿದಾಗ, ವಿರಹ ವ್ಯಥೆಯನ್ನು ಅನುಭವಿಸಿ ಸೃಷ್ಟಿಯ ಮುಂದೆ ನಿಂತು ಮೊರೆಯಿಡತಕ್ಕ ದೀನವಾಣಿ. ಈ 'ನೀವು ಕಾಣಿರೆ' ಎಂಬೊಂದು ಪದದಲ್ಲಿ ಒಂದು ಭವ್ಯ ಸಂಸ್ಕೃತಿಯ ಸಜೀವ ಚಿತ್ರವಿದೆ. ಜೀವನದ ಮಹಾ ಸಮಸ್ಯೆಯ ಹಂಬಲಿಕೆಯಿದೆ.

ಕಷ್ಟ ಸಂಕಟದಿಂದ ಕೂಡಿದ ಸಾಧನೆಗೆ ಪ್ರತಿಫಲವಿಲ್ಲದೆ ಇಲ್ಲ ಅಕ್ಕನ ವ್ಯಥೆ, ಕೊರಗು, ಸಂಕಟಗಳಿಗೆ ಮಾರ್ನುಡಿಯಿತ್ತ ಸೃಷ್ಟಿಯು ತನ್ನ ಪರದೆಯನ್ನು ಎತ್ತಿ 'ದಿವ್ಯದರ್ಶನ'ವನ್ನು ನೀಡಿತು. ಸಹಸ್ರಾರು ವಸಂತಋತುಗಳು ಪೃಥ್ವಿಯ ಮೇಲೆ ಒಮ್ಮೆಲೆ ಮೂಡಿದವು. ಪ್ರಕೃತಿಗೆ ಒಂದು ಹೊಸ ರೂಪು, ಹೊಸ ಕಳೆ, ಹೊಸ ಚೈತನ್ಯ ಬಂದಿತು.

ಒಂದು ಹೊಸ ಸಂಗೀತವೇ ಪೃಥ್ವಿಯ ಗರ್ಭದಿಂದ ಹೊರಟು ದಿಗ್ದಿಗಂತಗಳವರೆಗೂ ವ್ಯಾಪಿಸಿತು. 'ಚನ್ನಮಲ್ಲಿಕಾರ್ಜುನನ' ದಿವ್ಯದರ್ಶನ ಲಭಿಸಿತು ಆ ವನವು ವನವೆ? ಗಿಡವು ಗಿಡವೆ? ಶಿಲೆ ಶಿಲೆಯೆ? ನೆಲ ನೆಲವೆ? ಜಲ ಜಲವೆ? ಮೃಗ ಮೃಗವೆ?

ವನವೆಲ್ಲ ಕಲ್ಪತರುವಾಯಿತು! ಗಿಡವೆಲ್ಲ ಮರುಜೀವಣಿಯಾಯಿತು! ಶಿಲೆಗಳೆಲ್ಲ ಪರುಷಗಳಾದವು! ನೆಲವೆಲ್ಲ ಅವಿಮುಕ್ತ ಕ್ಷೇತ್ರವಾಯಿತು! ಜಲವೆಲ್ಲ ನಿರ್ಜರಾಮೃತವಾಯಿತು! ಮೃಗವೆಲ್ಲ ಪುರುಷಮೃಗಗಳಾದವು! ಎಡಹುವ ಹರಳುಗಳೆಲ್ಲ ಚಿಂತಾಮಣಿಯಾದವು! ಜೀವನವು ಕೇವಲ ಆನಂದದ ಅನಂತ ಪ್ರವಾಹದಲ್ಲಿ ಸಣ್ಣ ಎಲೆಯೊಂದರಂತೆ ತೇಲಿಹೋಯಿತು. ಅದು ಅವರ್ಣನೀಯ! ಅಸದೃಶ!! ಅನುಪಮ!!! ಮತ್ತು ಅದ್ಭುತ!!!! ಆದುದರಿಂದಲೇ ಅಕ್ಕನು ಬರಿ ಅಕ್ಕನಲ್ಲ! ಮಹಾದೇವಿಯಕ್ಕ!

ಶ್ರೀ ಚನ್ನಬಸವರಾಜೇಂದ್ರ ಸ್ವಾಮಿಗಳು ಇಲ್ಲಿ 'ಅಕ್ಕನ' ಈ 'ಬಾಳ'ನ್ನು ಚಿತ್ರಿಸಲು ಪ್ರಯತ್ನಿಸಿದ್ದಾರೆ. ಅದರ ಸರಿ–ತಪ್ಪುಗಳನ್ನು ನಿರ್ಣಯಿಸುವುದು ವಿಮರ್ಶಕರ ಪಾಲಿನಮಾತು; ಮುನ್ನುಡಿಕಾರನದಲ್ಲ. ಸಂತತವಾಗಿ ಕನ್ನಡ ಸಾಹಿತ್ಯಕ್ಕಾಗಿ ದುಡಿಯುತ್ತಿರುವ ಉತ್ಸಾಹಿ ಸಾಹಿತಿಗಳಲ್ಲಿ ಅವರೂ ಒಬ್ಬರು! ಅವರಲ್ಲೂ ವಿಶೇಷವಾಗಿ ವೀರಶೈವ ಸಾಹಿತ್ಯದಲ್ಲಿ ಅವರಿಗೊಂದು ಮುಖ್ಯ ಸ್ಥಾನವಿದೆ. ಅವರ ಭಾಷೆ ಬಹು ಸುಂದರವಾಗಿ ತಡೆಯಿಲ್ಲದ ತೊರೆಯಂತೆ ಹರಿಯುತ್ತದೆ. ಅವರು 'ಅಕ್ಕನಬಾಳು' ಎಂಬ ಪುಸ್ತಕವನ್ನು ಬರೆಯುವಾಗ ಈ **'ಬಾಳು'** ಎಂಬ ಪದದಲ್ಲಿ **ಸಾಸಿವೆಯ ಕಾಳಿನಲ್ಲಿ ಕಡಲ ನೀರನ್ನು ತುಂಬಿದಂತೆ ಅರ್ಥವನ್ನು ತುಂಬಿದ್ದಾರೆ.** ಅಕ್ಕನ ಜೀವನವನ್ನು ಕುರಿತು ಐತಿಹಾಸಿಕ ಸಂಗತಿಗಳು ವಿಶೇಷ ವಿವಾದಾಸ್ಪದವಾಗಿವೆ. ಪ್ರಕೃತ ಈ ಗ್ರಂಥವನ್ನು ಓದುವಾಗ ವಾಚಕರು ಅವುಗಳನ್ನು ಮರೆತು ಅಕ್ಕನ ಜೀವನದ ಬದಲಾವಣೆ ಮತ್ತು ಪರಿಣಾಮಗಳ ಕಡೆ ಹೆಚ್ಚು ಲಕ್ಷ್ಯವಿಟ್ಟರೆ ಲೇಸು.

ಶ್ರೀ ಮ. ನಿ. ಪ್ರ. ಮಹಾದೇವ ಸ್ವಾಮಿಗಳ ದಿವ್ಯ ಆಶೀರ್ವಾದ ಪ್ರಭಾವದಿಂದ ಸಾಹಿತ್ಯ ಸೇವೆಯು ದಿನೇದಿನೇ ಹೆಚ್ಚುತ್ತಿದೆ. ಅದೊಂದು ಕನ್ನಡದ ಸೌಭಾಗ್ಯ! ಅವರ ಅಪ್ಪಣೆಯ ಮೇರೆಗೆ ಮತ್ತು ಶ್ರೀ ಚನ್ನಬಸವರಾಜೇಂದ್ರ ಸ್ವಾಮಿಗಳವರ ಕೇಳಿಕೆಯ ಮೇರೆಗೆ ನಾನು ಮುನ್ನುಡಿಯನ್ನು ಬರೆಯಲು ಒಪ್ಪಿದೆನು ಏಕೆಂದರೆ ಅದು ಅಕ್ಕನ ಬಾಳಿಗೆ ಸಂಬಂಧಿಸಿದುದು. ಕರ್ನಾಟಕದಲ್ಲಿ ಅದರಲ್ಲಿ ವೀರಶೈವರಲ್ಲಿ ಅಕ್ಕನೆಂದರೆ ಅದೊಂದು ಬಗೆಯ ಅವ್ಯಾಜಪ್ರೇಮ ಅಥವಾ ಭಕ್ತಿ ತನಗೆ ತಾನೇ ಹೃದಯದಿಂದ ಚಿಲುಮೆಯ ನೀರಿನಂತೆ ಚಿಮ್ಮುತ್ತದೆ. ಅದಃಕಾರಣ ನಾವುಗಳು ನಮ್ಮ ಕಾಣಿಕೆಯನ್ನು ಅರ್ಪಿಸದಿರಲಾಗದೆಂದು ಅಂತರಾತ್ಮನು ಪ್ರೇರೇಪಿಸುತ್ತಾನೆ.

ಶ್ರೀ ಚನ್ನಬಸವರಾಜೇಂದ್ರ ಸ್ವಾಮಿಗಳವರ ಲೇಖನ ಕಲೆಯು ಇನ್ನೂ ಹೆಚ್ಚು ಪರಿಪುಷ್ಟಿಯನ್ನು ಹೊಂದಿ ಸಾಹಿತ್ಯದ ಸೇವೆ ಅವರಿಂದ ವಿಶೇಷವಾಗಿ ನಡೆಯಲೆಂದು ಬಯಸಿ, ನಾನು ನನ್ನ ಲೇಖನಿಯನ್ನು ನಿಲ್ಲಿಸುತ್ತೇನೆ.

**ಬೆಂಗಳೂರು**
**ತಾ. ೮-೧೨-೫೨**

**ಟಿ. ಎನ್. ಮಹದೇವಯ್ಯ.**



# ನಮ್ಮ ನುಡಿ



'ಅಕ್ಕನ ಬಾಳು' 'ಅಕ್ಕನ ಅಜ್ಜ ಬಾಳು' ಎಂಬ ನಾಮಾಂತರದಿಂದ ಇದೀಗ ಪುನರ್ಮುದ್ರಣವಾಗಿ ವಾಚಕರ ಕೈಸೇರಿದೆ. ಈ ಗ್ರಂಥದ ಬೇಡಿಕೆ ಬಹುವಾಗಿತ್ತು. ಅದಕ್ಕಾಗುವ ಯೋಗ ಒದಗಿರಲಿಲ್ಲ. ಈವಾಗ 'ತ್ಯಾಗವೀರ' ಶ್ರೀ ಶಿವಶಂಕರಪ್ಪನವರು ಶಿವಲಿಂಗಪ್ಪನವರು ಚಿತ್ತರಗಿ (ನಾಲತವಾಡ) ವಿಜಾಪುರ ಅವರು ಉದಾರ ಮನಸ್ಸಿನವರಾಗಿ ಆ ಯೋಗವನ್ನು ಒದಗಿಸಿದ್ದಾರೆ. ಇವರ ತ್ಯಾಗ ಜೀವನದ ಪರಿಚಯವು ವಾಚಕರಿಗೆ ಈಗಾಗಲೆ ಬೇಕಾದಷ್ಟಾಗಿದೆ. ಅದಕ್ಕಿಂತ ಹೆಚ್ಚಾಗಿ ಈಗ ಮಾಡಿಕೊಡಬೇಕಾದುದಿಲ್ಲ. ಇವರು ಈ ಕೃತಿಯ ಪುನರ್ಮುದ್ರಣದಿಂದ ಮುದಾಪೇಕ್ಷಿಯಕ್ಕಗಳ ಸೇವೆಯನ್ನೂ ಸಲ್ಲಿಸುತ್ತಿರುವುದು ತುಂಬಾ ಸಂತೋಷದ ವಿಷಯವಾಗಿದೆ. ಇವರಿಗೆ ಜಗದ್ಗುರು ಪಂಡಿತಾರಾಧ್ಯರು ಚಿರಾಯುರಾರೋಗ್ಯಭಾಗ್ಯಗಳನ್ನು ಚಿರಕೀರ್ತಿಯನ್ನು ಆಶೀರ್ವದಿಸಲಿ.

ತಾ. ೮ ೧೨–೫೨
**ಬೆಂಗಳೂರು**

ಶ್ರೀ ಜ. ಚ. ನಿ.
ಸಂಸ್ಥಾಪಕ.



## ಶರಣರಾದ ತ್ಯಾಗವೀರ ಚಿತ್ತರಗಿ ದಂಪತಿಗಳು.



ತ್ಯಾಗವೀರ ಶಿವಶಂಕರಪ್ಪನವರು ಶಿವಲಿಂಗಪ್ಪನವರು
ಚಿತ್ತರಗಿ, (ನಾಲತವಾಡ) ವಿಜಾಪೂರ.



ಶ್ರೀಮತಿ ಕಾಳಮ್ಮನವರು ಶಿವಶಂಕರಪ್ಪನವರು
ಚಿತ್ತರಗಿ, (ನಾಲತವಾಡ) ವಿಜಾಪೂರ.

# ಅಕ್ಕನ ಅಚ್ಚ ಬಾಳು.

— —

ಅಕ್ಕನ ಜೀವನವು ಮುಖ್ಯವಾಗಿ ಎರಡು ಬಗೆಯಾಗಿದೆ. ಒಂದು ಆಧ್ಯಾತ್ಮಿಕ; ಇನ್ನೊಂದು ಸಾಹಿತ್ಯಾತ್ಮಕ. ಅವಳ ಸಾಹಿತ್ಯಾತ್ಮಕ ಜೀವನವನ್ನು ಈಗಾಗಲೇ ಎಷ್ಟೋ ಜನ ಶ್ರೇಷ್ಠ ಸಾಹಿತಿಗಳು, ತಮ್ಮ ಉತ್ಕೃಷ್ಟವಾದ ಸ್ಫೂರ್ತಿದಾಯಕವಾದ ಬರವಣಿಗೆಯ ಹದಕ್ಕೆ ತಂದು ನಾಟಕ ರೂಪವಾಗಿ ಚರಿತ್ರಾತ್ಮಕವಾಗಿ ಹೆಣೆದು ಹೊರಹೊರಡಿಸಿದ್ದಾರೆ. ಇನ್ನು ಅವಳ ಆಧ್ಯಾತ್ಮಿಕವಾದ ತಾತ್ವಿಕವಾದ ಬಾಳಿನ ತಿರುಳನ್ನು ತಿಳಿಯಲು ಯತ್ನಿಸಬೇಕು. ಅದರ ರಹಸ್ಯವನ್ನು ಹೊರಗೆಡವಲು ಶೋಧಿಸಬೇಕು. ಏಕೆಂದರೆ ಅಕ್ಕನಿಗೆ ವಚನವಾಙ್ಮಯದಲ್ಲಿ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಯಾವ ಹಿರಿಯತನವಿದೆಯೋ, ಆ ಹಿರಿಯತನವು ಆಧ್ಯಾತ್ಮಿಕ ಪ್ರಪಂಚದಲ್ಲಿಯೂ ಇದೆ.

> "ಅಜಕೋಟಿ ವರುಷದವರೆಲ್ಲರೂ ಹಿರಿಯರೇ? ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೇ? ನಡುಮುರಿದು ಗುಡಗೂರಿ ತಲೆನಡುಗಿ ನರೆ ತೆರೆ ಹೆಚ್ಚಿ ಮತಿಗೆಟ್ಟು ಒಂದನಾಡ ಹೋಗಿ ಒಂಬತ್ತನಾಡುವ ಅಜ್ಞಾನಿಗಳೆಲ್ಲರೂ ಹಿರಿಯರೇ? ಅನುವರಿದು ಘನವ ತೀರಿಸಿ ಹಿರಿದು ಕಿರಿದೆಂಬ ಭೇದವ ಮರೆದು ಕೂಡಲ ಚನ್ನಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹದೇವಿಯಕ್ಕಂಗಾಯಿತ್ತು."

"ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ...." ಎಂಬ ವಚನದಿಂದ ಅಕ್ಕನಿಗೆ ಸಾಹಿತ್ಯ ಪ್ರಪಂಚದಲ್ಲಿ ಶ್ರೇಷ್ಠ ಸ್ಥಾನವನ್ನು ಕೊಟ್ಟ ಚನ್ನಬಸವಣ್ಣನೇ ಅವಳಿಗೆ ಆ ಸ್ಥಾನವನ್ನು ಆಧ್ಯಾತ್ಮಿಕ

ಡಲ್ಲಿಯೂ ಕೊಟ್ಟಿದ್ದಾನೆ. ಅದುಕಾರಣ ಅವಳ ಬಾಳನ್ನು ಈ ಬಟ್ಟೆಯಲ್ಲಿ ಈಗ ಅವಲೋಕಿಸಬೇಕಾಗಿದೆ. ಈ ಕಾರ್ಯವು ಅವಳ ವಚನವನ್ನು ಬಿಟ್ಟರೆ ಬೇರೆ ಯಾವುದರಿಂದಲೂ ತೃಪ್ತಿಕರವಾಗಿ ತುದಿಗಾಣದು. ಅವಳ ಆ ಪರಿಶುದ್ಧ ಆಧ್ಯಾತ್ಮಿಕ ಜೀವನಕ್ಕೆ ಅದೇ ಒರೆಗಲ್ಲು; ಅದೇ ಪಡಿನೆಳಲು.

## ಒ ಳ ಬಾ ಳು.

ಒಳಬಾಳೆಂದರೆ ನಾನಾರು ಎಂಬ ಪ್ರಶ್ನೆಯು ಮೊದಲು ಮನಸ್ಸಿನಲ್ಲಿ ಹೊಳೆದು, ಅನಂತರ ಅದನ್ನು ಅರಸಿ ಅಳವಡಿಸಿಕೊಳ್ಳುವುದು. ಮೊದಲು ತನ್ನ ವ್ಯಕ್ತಿತ್ವವನ್ನೇ ತಾನು ಗುರ್ತಿಸಿಕೊಳ್ಳದವನು ಎರಡನೆಯದಿನ್ನೇ ನರಿಯಬಲ್ಲನು? ಆದ್ದರಿಂದಲೇ ನಮ್ಮ ಪೂರ್ವಜರು ತನ್ನತನವನ್ನು ತಿಳಿಯಲು ತಮ್ಮ ಜೀವನದಲ್ಲಿ ಹೆಚ್ಚು ಹೆಣಗಿದರು. ಗ್ರೀಕರಾದರೂ 'ನಿನ್ನನರಿತುಕೋ' ಎಂದು ಹೇಳುವರು. ನಾನು ಎಂಬುದಕ್ಕೆ ಜಡವಾದ ಜಗತ್ತಾಗಲಿ, ಪಂಚಭೂತಾತ್ಮಕ ದೇಹವಾಗಲಿ, ಅಂತಃಕರಣ ಚತುಷ್ಟಯವಾಗಲಿ ಲಕ್ಷ್ಯವಾಗಲಾರವು. ಇವುಗಳನ್ನೆಲ್ಲ ವ್ಯಾಪಿಸಿಕೊಂಡು ಇವುಗಳನ್ನು ಮೀರಿ ಆಚೆಗಿರುವ ಸಚ್ಚಿದಾನಂದ ನಿತ್ಯಪರಿಪೂರ್ಣವಾದ ಚೈತನ್ಯವೇ ನಾನು. ಇದನ್ನರಿಯಲು ಹವಣಿಸಿ ಹೆಣಗಿದ ಜೀವನವೇ ಆಧ್ಯಾತ್ಮ ಜೀವನ. ಅದುವೇ ಅಚ್ಚಳಿಯದ ಜೀವನ. ಆ ಉಚ್ಚ ಜೀವನದಲ್ಲಿ ಅಡಿಯಿಟ್ಟವರಿಗೆ ದುಃಖವು ದೂರಾಗುವುದು. ದ್ವಂದ್ವಗಳು ಆವರಿಸವು. ಪ್ರಾಪಂಚಿಕದ ಹಂಗು ಹರಿವುದು. ಪಂಚಭೂತಾತ್ಮಕ ದೇಹದ ಮೋಹವು ಮಾಯವಾಗುವುದು. ವಿಷಯ ಸುಖವು ವಿಷಪ್ರಾಯವಾಗುವುದು. ಏಕೆಂದರೆ ಆಧ್ಯಾತ್ಮಿಕ ಪ್ರಪಂಚದಲ್ಲಿರುವ ಆದರ್ಶ ಜೀವನು,

ಆಕಾಂಕ್ಷಿಸುವುದು ಆತ್ಮಸುಖವೊಂದೆ. ಅದರ ಮುಂದೆ ವಿಷಯಸುಖವು ಅಮೃತದ ಮುಂದೆ ಆಮ್ಲವಿದ್ದ ಹಾಗೆ. ಅಂತರಂಗದಲ್ಲಿ ಆತ್ಮಾನಂದದ ಸೆಲೆ ಒಮ್ಮೆ ಒಡೆಯಿತೆಂದರೆ ಪ್ರಾಪಂಚಿಕ ಈ ಕ್ಷಣಿಕ ಬಯಕೆಗಳಿಗೆ ಆತನು ಬಾಯ್ನೀರು ಕರೆಯನು. ಮಾಯದ ಮಾಟಕ್ಕೆ ಮೈಯೊಡ್ಡನು; ಕಾಯದ ಕಾಟಕ್ಕೆ ಮನಸೋಲನು. ಕಾಯದ ವಿಷಯದಲ್ಲಿ—

> "ಅಮೇಧ್ಯದ ಹಡಿಕೆ. ಮೂತ್ರದ ಕುಡಿಕೆ. ಎಲುವಿನ ತಡಿಕೆ.
> ಕೀವಿನ ಹಡಿಕೆ. ಸುಡಲೀ ದೇಹವ. ಒಡಲವಿಡಿಹು ಕೆಡದಿರು.
> ಚನ್ನ ಮಲ್ಲಿಕಾರ್ಜುನನರಿ ಮರುಳೆ"

ಎಂದು ಅಕ್ಕನು ಹೇಳುವ ನಿರ್ಧಾರಕ್ಕೆ ಬರುವನು. ಸದ್ಭಕ್ತಿ, ಸಮ್ಯಜ್ಞಾನ, ಸತ್ಕ್ರಿಯೆಗಳಿಂದ ಶಾಂತನಾಗಿ ವರ್ತಿಸುವನು. ಅವನು ನವಿಲು ಮೇಘಧ್ವನಿಗೆ ಕಿವಿಗೊಟ್ಟು ಗರಿಗೆದರಿ ಕುಣಿಕುಣಿದು ಆನಂದಿಸುವಂತೆ ಲಿಂಗಾನುಭವಕ್ಕೆ ಕಿವಿಗೊಡುವನು. ಕೋಗಿಲೆಯು ಮಾವಿನ ತಳಿರಿಗೆ ಬಾಯ್ದೆರೆವಂತೆ ಆತನು ಶಿವಪ್ರಸಾದಕ್ಕೆ ಬಾಯ್ದೆರೆಪನು. ತುಂಬಿ ಕುಸುಮಗಂಧಕ್ಕೆಳೆಸುವಂತೆ ಆತನು ಲಿಂಗಘ್ರಾತವಾದುದನ್ನೆ ಘ್ರಾಣಿಸುವನು. ಹೆಚ್ಚೇನು? ಆತನ ಇಂದ್ರಿಯ ವ್ಯವಹಾರವೆಲ್ಲವೂ ಆತ್ಮನಲ್ಲಿಯೇ ಉಂಟಾಗಿ ಆ ಆತ್ಮನೇ ತಾನಾಗುವನು. ಅದೇ ಒಳಬಾಳು. ಆ ಬಾಳು ಳ್ವವಳು ಅಕ್ಕಮಹಾದೇವಿ. ಅವಳ ಆ ಆಧ್ಯಾತ್ಮಿಕ ಜೀವನಾಂಬುಧಿಯ ಬೆಡಗನ್ನು ಕಾಣಬೇಕೆಂಬುದೇ ಈ ಬರಹಗಾರನ ಉದ್ದೇಶ. ಅದು ಸಂಪೂರ್ಣ ಕಾಣದು. ಆದರೂ ಕಣ್ಣಿಗೆ ಕಂಡಷ್ಟರಲ್ಲಿ ಅದರಲ್ಲಿಯೂ ಹೃದಯ ಪಾತ್ರೆಯು ಹಿಡಿದಷ್ಟನ್ನು ಮಾತ್ರ ತುಂಬಿ ತಂದು ಲೇಖನಿಯ ಮುಖದಲ್ಲಿ ಇಳಿಸಲು ತೊಡಗಿದ್ದೇನೆ. ತುಂಬಿ ತಂದುದರಲ್ಲಿಯಾದರೂ ಎಲ್ಲವೂ ಬರಹದಲ್ಲಿ ಹರಿದು ಬಂದಿದೆ ಎಂದು ಹೇಳಲಾರೆ. ಹೇಳಲು ಸಾಧ್ಯವೂ ಇಲ್ಲ. ಅದರಲ್ಲಿ ಒಂದು ಶತಾಂಶ ಅಲ್ಲ ಒಂದು ಸಹಸ್ರಾಂಶ ಮಾತ್ರ ಹರಿದುಬಂದಿರಬಹುದು.



# ಅಕ್ಕನ ಹುಟ್ಟು.

ಭೌತಿಕ ಭೋಗ ಭಾಗ್ಯಕ್ಕೆ ಲೌಕಿಕ ಶಿಶುವಾಗಿ ಜನಿಸುವಂತೆ, ಆಧ್ಯಾತ್ಮಿಕ ಷಟ್‌ಸ್ಥಲ ಬ್ರಹ್ಮಾನುಭಾವವನ್ನು ಕೇಳಿ ಹೇಳಿ ಅಳವಡಿಸಿ ಕೊಂಡು ಆನಂದಿಸುವುದಕ್ಕೆ ಆಧ್ಯಾತ್ಮಿಕ ಶಿಶುವಾಗಿ ಹುಟ್ಟಲೇಬೇಕು. ಆಧ್ಯಾತ್ಮಿಕ ಶಿಶುವಾಗದ ಹೊರ್ತು ಆತ್ಮಾನಂದವನ್ನು ಅನುಭವಿಸಲು ಸಾಧ್ಯವಿಲ್ಲ. ಆ ಆಧ್ಯಾತ್ಮಿಕ ಶಿಶುವಾಗಿ ಜನಿಸಲು ಈ ತಂದೆ-ತಾಯಿಗಳು ಬೇಕಿಲ್ಲ. ಇವರು ಕೇವಲ ತನುಜನಕರೇ ಹೊರ್ತು ಆತ್ಮದರಿವಿನ ಜನಕ ರಲ್ಲ. ಅದನ್ನು ಹುಟ್ಟಿಸುವವನು ಆತ್ಮಜ್ಞಾನಿಯಾದ ಗುರುವು. ಅಕ್ಕನು ಇಂತಹ ಗುರುವಿನಿಂದಲೇ ಆಧ್ಯಾತ್ಮಿಕ ಶಿಶುವಾಗಿ ಹುಟ್ಟಿದಳು. "ಹುಟ್ಟಿದೆ ಶ್ರೀಗುರುವಿನ ಹಸ್ತದಲ್ಲಿ" ಎಂದು ಹೇಳಿಕೊಂಡಳು. ಈ ಹುಟ್ಟು ಸರ್ವ ಸಾಮಾನ್ಯವಾದುದಲ್ಲ. ಮೊದಲು ಮನುಷ್ಯನಾಗಿ ಜನಿಸುವುದೇ ದುರ್ಲಭ. ಅದರಲ್ಲಿ ಸರ್ವಾಂಗಗಳಿಂದ ಸಂಪೂರ್ಣನಾಗಿ ಸುಂದರನಾಗಿ ಜನಿಸುವುದು ಇನ್ನೂ ದುರ್ಲಭ. ಅದಕ್ಕೂ ಪುಣ್ಯ ಬೇಕು; ಭಾಗ್ಯ ಬೇಕು. ಅಂದಮೇಲೆ ಆಧ್ಯಾತ್ಮಿಕ ಶಿಶುವಾಗಿ ಜನಿಸಬೇಕಾದರೆ ಎಂತಹ ಪುಣ್ಯ-ಭಾಗ್ಯಗಳು ಬೇಕೆಂಬುದನ್ನು ನಾವು ಯೋಚಿಸಬೇಕು. ಈತನ ಕರಣಗಳಾದರೂ ಲಿಂಗಗಳಿಂದ ಪರಿಪೂರ್ಣಗಳಾಗಿ ತಯಾರಾಗಬೇಕು. ಅಂದರೆ ಈತನು ಎಲ್ಲ ವಿಷಯವಾಸನೆಯನ್ನಳಿದು ಆತ್ಮವಾಸನೆಯಿಂದ ಜನಿಸಬೇಕು. ಎಲ್ಲ ಅವಯವಗಳೂ ಆತ್ಮನೋಟ, ಆತ್ಮಧ್ವನಿ, ಆತ್ಮಸ್ಪರ್ಶ, ಆತ್ಮತೃಪ್ತಿಗಳಿಂದ ತುಂಬಿಕೊಂಡಿರಬೇಕು. ಹೀಗೆ ಆಧ್ಯಾತ್ಮಿಕ ರಸ್ತದಿಂದ ಪರಿಪೂರ್ಣವಾದ ಪರಿಪುಷ್ಟವಾದ ಅಂಗನಾಗಿ, ಗುರುವಿನಿಂದ ಜನಿಸುವುದೇ ಆಧ್ಯಾತ್ಮದ ಹುಟ್ಟು. ಈ ಹುಟ್ಟನ್ನು ಸಾಧಿಸಿದಳು ಆ ಶರಣೆ ಮಹಾದೇವಿ. ಆದ್ದರಿಂದಲೇ ಅವಳು ಇಂದಿಗೂ ಮಹಾ-ದೇವಿಯಾಗಿ ಬಾಳಿದಳು.

# ಅಕ್ಕನ ಬೆಳವಣಿಗೆ.

"ಬೆಳೆದೆನು ಅಸಂಖ್ಯಾತರ ಕರುಣದೊಳಗೆ. ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ, ಪರಮಾರ್ಥವೆಂಬ ಸಕ್ಕರೆಯನಿಕ್ಕಿದರು ನೋಡಾ! ಇಂತಪ್ಪ ತ್ರಿವಿಧಾಮೃತದ ಪಣಿಯನೆರೆದು ಸಲಹಿದರು.''

ಜನಿಸಿದ ಸ್ಥೂಲತನು, ತಾಯಿಯ ಮೊಲೆ ಹಾಲು, ತಾಯಿಯ ಪ್ರೇಮ ಮೊದಲಾದವುಗಳಿಲ್ಲದೆ ಹೇಗೆ ಬದುಕಿ ಬಾಳಲಾರದೋ ಹಾಗೆ ಆಧ್ಯಾತ್ಮಿಕ ಶಿಶುವು ಗುರುವಿನ ಅಥವಾ ಸತ್ಪುರುಷರ ಅನುಗ್ರಹ, ಅವರೀಯುವ ಜ್ಞಾನಕ್ರಿಯೆ ಮುಂತಾದ ಆಹಾರವಿಲ್ಲದೆ ಎಂದಿಗೂ ಬೆಳೆದು ಬಾಳಲಾರದು. ಅನ್ನಕ್ಕೆ ಹುಟ್ಟಿದುದು ಈ ಜೀವ. ಅನ್ನವಿಲ್ಲದೆ ಅರಕ್ಷಣವೂ ಬದುಕಲಾರದು. 'ಜೀವೋ ಜೀವೇನ ರಕ್ಷತಿ' ಎಂಬಂತೆ ಈ ಶಿಶುವು ಮತ್ತೊಂದು ಜೀವದಿಂದ ಬದುಕುವಂತೆ, ಆಧ್ಯಾತ್ಮಿಕ ಶಿಶುವಾದರೂ ಗುರುಗಳ, ಮಹಾನುಭಾವಿಗಳ ಆತ್ಮಜ್ಞಾನಾದಿ ಆಹಾರದಿಂದಲೇ ಬದುಕಿ ಬಾಳಬೇಕು; ಉಳಿದು ಬೆಳೆಯಬೇಕು; ಬೆಳೆಯುತ್ತದೆ. "ಅನ್ನಂ ಬ್ರಹ್ಮೇತಿ ವಿಜಾನೀಯಾತ್" ಎಂಬ ಶ್ರುತಿಯಂತೆ ಈ ಲೌಕಿಕ ಜೀವನು ಬದುಕಲು ತಾಯಿಯ ಹಾಲು, ಹಸುವಿನ ತುಪ್ಪ, ಕಬ್ಬಿನ ಸಕ್ಕರೆಗಳೇ ಬ್ರಹ್ಮಸ್ವರೂಪವಾಗಿದ್ದರೆ, ಆಧ್ಯಾತ್ಮಿಕ ಜೀವನಿಗೆ ಗುರುವಿನ ಜ್ಞಾನಾಮೃತವೆಂಬ ಹಾಲು, ಅದರಿಂದ ತನ್ನಲ್ಲಿ ಜನಿಸುವ ಆತ್ಮವಾಸನೆಯ ಕಂಪುದುಪ್ಪ, ಆತ್ಮಾನಂದ ಅಥವಾ ಸಮರಸಾನಂದವೆಂಬ ಸವಿಸಕ್ಕರೆ ಇವೇ ಅನ್ನರೂಪ ಬ್ರಹ್ಮಗಳಾಗಿವೆ. ಸ್ಥೂಲಕ್ಕೆ ಸ್ಥೂಲಾನ್ನವೇ ಬ್ರಹ್ಮ, ಸೂಕ್ಷ್ಮಕ್ಕೆ ಸೂಕ್ಷ್ಮಾನ್ನವೇ ಬ್ರಹ್ಮ. ಇದರಿಂದಲೇ ಉಪನಿಷತ್ತಿನ ಮಾತಿಗೂ ಸಾರ್ಥಕ್ಯ. ಹೀಗೆ ಅಕ್ಕನು ಆಧ್ಯಾತ್ಮಿಕ ಆಹಾರದಿಂದ ಆರೋಗ್ಯವಾಗಿ ಬೆಳೆದು ಪ್ರೌಢವಯಸ್ಕಳಾಗಿದ್ದಾಳೆ.

# ಅಕ್ಕನ ಮದುವೆ.

---

ಪ್ರೌಢವಯಸ್ಸಿನ ಯುವತಿಯರು ವಿವಾಹಿತರಾಗುವುದು ವಿಹಿತವಾದುದಲ್ಲವೆ? ಹಾಗೆ ನಮ್ಮ ಆಧ್ಯಾತ್ಮಿಕ ಪ್ರೌಢಯುವತಿಯಾದ ಅಕ್ಕನೂ ಸಹ ಆಧ್ಯಾತ್ಮಿಕ ವಿವಾಹವನ್ನು ಮಾಡಿಕೊಂಡಿದ್ದಾಳೆ. ಮಾಡಿಕೊಳ್ಳುವುದೂ ಉಚಿತ. ಪತಿಯಿಲ್ಲದ ಹೆಣ್ಣು, ರಸವಿಲ್ಲದ ಹಣ್ಣು. ಜೀವನದಲ್ಲಿ ಒಂದು ವಿಶಿಷ್ಟ ಸುಖರಸವನ್ನು ಪಡೆಯಬಹುದಾದರೆ ಅದು ಸತಿ-ಪತಿಯಲ್ಲಿಯೆ. ಆ ಅಚ್ಚೊತ್ತಿದಂತಹ ಸುಖವು, ತಾಯಿ-ಮಗು, ಗುರು-ಶಿಷ್ಯ ಮೊದಲಾದ ಇನ್ನಾವ ಸಂಬಂಧದಲ್ಲಿಯೂ ಸಿಕ್ಕಲಾರದು. ಆದುದರಿಂದಲೇ ನಮ್ಮಲ್ಲಿ 'ಶರಣಸತಿ ಲಿಂಗಪತಿ' ಎಂಬ ಉತ್ಕೃಷ್ಟವಾದ ಉದಾರವಾದ ತತ್ವವನ್ನು ನಮ್ಮ ಪೂರ್ವಜರು ತಂದು ತುಂಬಿದ್ದಾರೆ. ಅದುಕಾರಣ ಸತಿ ಪತಿಯನರಸುವದೂ, ಪತಿ ಸತಿಯನರಸುವದೂ ಉಚಿತವಾದುದೆ.

'ಕನ್ಯಾವರಯತೇ ರೂಪಂ ಮಾತಾವಿತ್ತಂ ಪಿತಾಶ್ರುತಂ' ಎಂಬ ಆರ್ಯೋಕ್ತಿಯಂತೆ ಕನ್ಯೆಯು ತನ್ನ ಮನಕ್ಕೊಪ್ಪುವಂತಹ ವರನನ್ನು ಹುಡುಕುವುದು ಅಥವಾ ಬಯಸುವುದು ಸಹಜವಾದ ಮಾತು. ಒಂದುವೇಳೆ ಇದಕ್ಕೆ ವಿರುದ್ಧವಾಗಿ ತಾಯಿಯು ರೂಪಿಲ್ಲದ ಸಾಹುಕಾರನಿಗೆ ಕೊಟ್ಟರೆ ಆಕೆ ಒಪ್ಪಳು. ತಂದೆ ಜ್ಞಾನಿಗೆ ಕೊಟ್ಟರೆ ಸೈರಿಸಳು. ಬಂಧುಗಳು ಬರೀ ಕುಲೀನರಿಗೆ ಕೊಟ್ಟರೆ ಒಡಂಬಡಳು. ತನಗೆ ಬೇಕಾದುದೊಂದು ಗುಣವಿದ್ದರಾಯಿತು. ಉಳಿದವುಗಳಿದ್ದರೂ ಸರಿ; ಇಲ್ಲದಿದ್ದರೂ ಸರಿ. ತನ್ನ ಪ್ರೇಮಕ್ಕೆ ಕಾರಣವಾದವನೇ ತನ್ನ ಮುಂದಿನ ಸುಖಕ್ಕೆ ಸಮರ್ಥನು. ಕನ್ಯೆ ಮೆಚ್ಚಿದ ವರನೇ ಕನ್ಯೆಯ ಸೌಭಾಗ್ಯಸ್ವರೂಪನು. ಆದಕಾರಣ ಅವಳೊಲಿದ ಪುರುಷನೇ ಅವಳಿಗೆ ತಕ್ಕ ವರ. ಆತನಿಗೆ ಅವಳನ್ನು ಕೊಟ್ಟುಬಿಡಬೇಕು. ಅದೇ ಸುಖವಿವಾಹ. ಅದು ವಿರುದ್ಧವಾದರೆ

ಆದೇ ವಿಷಯ ವಿವಾಹವಾಗಿ ಪರಿಣಮಿಸುವದು. ಕನ್ಯೆ ಧೀರಳಾದರೆ ಅದನ್ನು ಒಪ್ಪಳು. ಇಂತಹದೊಂದು ಸನ್ನಿವೇಶವು ಅಕ್ಕನಿಗೆ ಬಂದೊದಗಿದೆ. ತಾಯಿ-ತಂದೆಗಳು, ಮಗಳು ವಯಸ್ಕಳಾದಳು, ಲಗ್ನ ಮಾಡಬೇಕು, ಯಾರಿಗೆ ಕೊಡಬೇಕು ಎಂದು ಮಾತಾಡಿಕೊಳ್ಳುತ್ತಿರುವರು. ಅದನ್ನು ಕೇಳಿ, ಮೀರಿದ ವಿರಕ್ತೆಯಾದ ಅಕ್ಕನು ತನಗೆ ಅನುರೂಪನಾದ ಗಂಡನನ್ನು ತಾನೇ ಆರಿಸಿದ್ದಾಳೆ. ತಾಯಿಯನ್ನು ಕುರಿತು-

"ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ **ಚಲುವಂಗಾ**ನೊಲಿದೆ ಅವ್ವಾ!
ಎಡೆಯಿಲ್ಲದ ಕಡೆಯಿಲ್ಲದ ತೆರಹಿಲ್ಲದ ಕುರುಹಿಲ್ಲದ ಚಲುವಂಗಾ
ನೊಲಿದೆ ಎಲೆ ಅವ್ವಾ!!"

ಎಂದು ತನ್ನ ಪತಿಯ ಕುರುಹನ್ನು ಹೇಳತೊಡಗಿದ್ದಾಳೆ. ಆಗ ಅಹಳ ತಾಯಿಯಾದ ಸುಮತಿಯು – ಅವನು ಬೇಡ, ಅವನು ಧನಿಕನಲ್ಲ, ಕೈಯಲ್ಲಿ ಜಡುವಿಡಿದ ದರಿದ್ರನು. ಕುಲವಂತನಲ್ಲ, ಪಿಶಾಚಿಗಳ ಒಡನಾಡಿಗ, ಎಂದು ನಡುವೆ ಮಾತೆತ್ತಿ ಮುಂದುವರಿಸುತ್ತಿರುವಾಗ ಅವಳನ್ನು ಅಷ್ಟಕ್ಕೇನೆ ತಡೆದು —

"ನೀನು ಕೇಳಾ ಎಲೆ ತಾಯೆ! ಭವವಿಲ್ಲದ ಭಯವಿಲ್ಲದ ನಿರ್ಭಯ
ಚಲುವಂ ಗೊಲಿದೆ ನಾನು. **ಕುಲಸೀಮೆಯಿಲ್ಲದ ನಿಸ್ಸೀಮ**
ಚಲುವಂಗೆ ನಾನೊಲಿದೆ. ಇದುಕಾರಣ ಚನ್ನಮಲ್ಲಿಕಾರ್ಜುನ
ಚಲುವ ಗಂಡನೆನಗೆ. ಈ ಸಾವ ಕೆಡುವ ಗಂಡರನೊಯ್ದು
ಒಲೆಯೊಳಗಿಕ್ಕು."

ಎಂದು ಒಳ್ಳೇ ರೋಷದಿಂದ, ಅಂತಃಕರಣದ ಆವೇಶದಿಂದ ಹೇಳಿಕೊಳ್ಳುತ್ತಾಳೆ. ಅವಳ ಆ ಮಾತನ್ನು ಕೇಳಿ ಆ ಮನೋನಿಶ್ಚಯವನ್ನು ನೋಡಿ ತಾಯಿಗೆ ದಿಗಿಲು ಬುಗಿಲು ಬಿದ್ದು ಹೋಗಿದೆ. ಈ ಲೋಕದ ಗಂಡರ ಬಿಟ್ಟು ಆ ಲೋಕದ ಗಂಡನ ಮೇಲೆ ಎಂತಹ ಪ್ರೀತಿಯು ಹುಟ್ಟಿಬಿಟ್ಟಿದೆಯಲ್ಲ! ಇವರು 'ಕೆಡುವ' ಗಂಡರಂತೆ. ಎಂತಹ ಅರ್ಥಪೂರ್ಣವಾದ ಮಾತಿದು! ರೀತಿ-ನೀತಿಗಳಿಂದಲೋ, ರೋಗ-ರುಜುಗಳಿಂದಲೋ

ಇವರು ಕೆಟ್ಟುಹೋಗುವುದೇನೋ ಬಹುಮಟ್ಟಿಗೆ ನಿಜ. ಆದರೆ ಹೆಣ್ಣು ಮಕ್ಕಳು ಭೌತಿಕ ದೇಹವನ್ನು ಧರಿಸಿ ಭೂಲೋಕಕ್ಕೆ ಬಂದಮೇಲೆ ಅವರನ್ನು ಬಿಟ್ಟರೆ ಬೇರೆ ಗತಿಯಾರು? ಅವರನ್ನು ಬಿಟ್ಟರೆ ಅಬಲೆಯರ ಜೀವನವೇ ಸಾಗುವದಿಲ್ಲ. ಹೀಗಿದ್ದರೂ ನನ್ನ ಮಗಳು **ಕಾಣದ ದೇವರಲ್ಲಿ ಕಣ್ಣಿಟ್ಟಿದ್ದಾಳೆ.** ಏನುಮಾಡಲಿ! ಯಾರಿಗೆ ಹೇಳಲಿ! ನನ್ನ ಮಾತನ್ನೇ ಲೆಕ್ಕಿಸುವದಿಲ್ಲ. ಇನ್ನು ತಂದೆಯ ಮಾತನ್ನು ಲೆಕ್ಕಿಸುವಳೇ? ಅದೆಂದಿಗೂ ಲೆಕ್ಕಿಸಳು. ಇವಳಿಗೆ ಅತ್ಯಂತ ಜೀವದ ಗೆಳತಿಯರಿಂದ ಹೇಳಿಸಿ ನೋಡುವೆನು. ಅದರಿಂದಲಾದರೂ ತುಸು ದಾರಿಗೆ ಬರಬಹುದು ಎಂದು ಯೋಚಿಸಿ ಹಾಗೆಯೇ ಮಾಡುವಳು. ಸಖಿಯರಾದರೂ ಸಮಯ ಸಾಧಿಸಿ ಎಷ್ಟೋ ಬಗೆಯಾಗಿ ಹೇಳುವರು. ಆದರೆ ಅವನ್ನೆಲ್ಲ ಅಕ್ಕನು ಆಲಿಸದೆ ಆವರಿಗೆ ಪ್ರತಿಯಾಗಿ—

> "ಗಿರಿಯಲ್ಲದೆ ಹುಲ್ಲುಮರಡಿಯಲ್ಲಾಡುವುದೇ ನವಿಲು? ಕೊಳನಲ್ಲದೆ ಕಿರಿವೆಳ್ಳಕ್ಕೆಳಸುವುದೇ ಹಂಸೆ? ಮಾಮರ ತಳಿತಲ್ಲದೆ ಸ್ವರಗೈವುದೇ ಕೋಗಿಲೆ? ಪರಿಮಳವಿಲ್ಲದೆ ಪುಷ್ಪಕ್ಕೆಳಸುವದೇ ಭ್ರಮರ? **ಎನ್ನದೇವ ಚನ್ನಮಲ್ಲಿಕಾರ್ಜುನನಲ್ಲದೆ ಅನ್ಯಕ್ಕೆಳಸುವುದೇ ಎನ್ನ ಮನ,** ಕೇಳಿರೇ ಕೆಳದಿಯರಿರಾ?"

ಎಂದು ಸ್ಪಷ್ಟವಾಗಿ ನಿರ್ದಾಕ್ಷಿಣ್ಯದಿಂದ ಉತ್ತರಕೊಡುತ್ತಾಳೆ. ಅವಳ ಈ ಅಚಲ ಸ್ಥಿತಿಗೆ ಆವರೂ ಬೇರೆ ಏನೂ ಮಾತಾಡದೆ ಮೌನರಾಗಿಬಿಡುತ್ತಾರೆ.

ಇತ್ತ ಅಕ್ಕಮಹಾದೇವಿಗೆ ಮಲ್ಲಿಕಾರ್ಜುನನನ್ನೇ ಮದುವೆಯಾಗುವ ಹಂಬಲವು ದಿನೇ ದಿನೇ ಹೆಚ್ಚು ಹೆಚ್ಚಾಗಿ ಬೆಳೆಯತೊಡಗಿತು. ಆದರೆ ಆತನನ್ನು ಕರೆತಂದು ಲಗ್ನಮಾಡಿಕೊಡಲು ಯಾರಿಂದ ಸಾಧ್ಯ? ಹೆತ್ತ ತಾಯಿ-ತಂದೆಗಳಿಗೂ ಶಕ್ಯವಿಲ್ಲ. ಕೂಡಿ ಒಡನಾಡುವ ಕೆಳದಿಯರಿಗೂ ಸಾಧ್ಯವಿಲ್ಲ; ಬೇರೆ ಇನ್ನಾರಿಗೂ ನೀಗುವಂತಿಲ್ಲ. ಅವಳು ತನ್ನ ಭಾವೀ ಪತಿಯನ್ನು ತಾನೇ ಬರಮಾಡಿಕೊಳ್ಳಬೇಕು. ಆತನಾದರೂ

ಕರೆದಾಕ್ಷಣ ಬರುವವನಲ್ಲ. ಲೋಕದ ಗಂಡರಂತೆ ಈ ಕಣ್ಣಿನ ಕುಡಿ ನೋಟಕ್ಕೆ ಮರುಳಾಗುವವನಲ್ಲ. ಮೈಯ ವಯ್ಯಾರದ ಬೆಡಗಿಗೆ ಸೋಲುವವನಲ್ಲ. ಕಾಮನ ಬಿಲ್ಲಿನಂತಿರುವ ಹುಬ್ಬಿನ ಕುಣಿತಕ್ಕೆ ಮಬ್ಬಾಗುವವನಲ್ಲ. ಏನು ಮಾಡಿದರೂ ಬಾಹ್ಯ ಶೃಂಗಾರಕ್ಕೆ ಸುಳಿವವನಲ್ಲ. ಮನಸ್ಸು ಹರಿಬಿಟ್ಟರೆ ಮರೆಯಾಗುವನು. ಮಾಡುವುದೇನು? ಅಕ್ಕನು ಇವನ್ನೆಲ್ಲ ಬಿಟ್ಟು ಆತನೊಲಿಯುವ ಮಾರ್ಗವನ್ನೇ ಹುಡುಕುತ್ತಿದ್ದಳು. ಹೊಳೆದ ಮಾರ್ಗದಲ್ಲಿಯೇ ಮಗ್ನಳಾಗುತ್ತಿದ್ದಳು. **"ಹರನೇ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಿಸಿದ್ದೆ ನೋಡಾ!"** ಎಂಬುದಾಗಿ ಆತನಿಗಾಗಿ ಅವಳು ಬಹು ವಿಧವಾಗಿ ಬಹುಕಾಲ ಶ್ರಮ ಪಟ್ಟಿದ್ದಳು; ಪಡುತ್ತಲಿದ್ದಳು. ತಾನು ತನ್ನ ನಲ್ಲನೆಂದು ಭಾವಿಸಿದ್ದ ಮಲ್ಲಿಕಾರ್ಜುನನ ದರ್ಶನವು ಅವಳಿಗೆ ತೀರ ಹೊಸದಲ್ಲ. ಅವಳು ತಾನು ಹುಟ್ಟಿದೊಡನೆಯೆ ತನ್ನ ಗುರುವಿನ ಸಮಕ್ಷಮದಲ್ಲಿಯೇ ಕಂಡಿದ್ದಳು. ಅಂದಿನಿಂದ ಅವನ ಮೇಲೆ ಮನಪೂರಿಮ ಅವಳ ಬಯಕೆ ಹೆಬ್ಬಯಕೆಯಾಗಿದ್ದಿತು.

> "...ಚನ್ನಮಲ್ಲಿಕಾರ್ಜುನಯ್ಯಾ, ನಾ ಹುಟ್ಟಿದೊಡನೆ ವಿಭೂತಿಯ ಪಟ್ಟವ ಕಟ್ಟಿ ಸದ್ಗುರುಸ್ವಾಮಿ ಲಿಂಗಸ್ವಾಯತವ ಮಾಡಿದನಾಗಿ ಧನ್ಯಳಾದೆನು."

ಎಂದು ತನ್ನ ಗಂಡನನ್ನು ಕಂಡ ಕಾಲನ್ನು ಒಮ್ಮೆ ನೆನಿಸಿಕೊಳ್ಳಬೇಕು; ಮತ್ತೊಮ್ಮೆ ಅಂತಹ ಸೌಭಾಗ್ಯವನ್ನು ಸದ್ಗುರುವು ಅಂದಾದರೂ ತಂದು ಕೊಟ್ಟನಲ್ಲ ಎಂದು ಸ್ವಲ್ಪ ಸಂತೈಸಿಕೊಳ್ಳಬೇಕು. ಹೀಗೆ ಹುಟ್ಟಿನಿಂದಲೇ ಹರನೇ ಗಂಡನಾಗಬೇಕೆಂದು ನಚ್ಚಿ ನಿರ್ಧರಿಸಿಕೊಂಡ ಅವಳ ಮನದೊಲುಮೆಯನ್ನು ಕೆಡಿಸಿ ಇತ್ತ ಹೊರಳಿಸಲು ಯಾರಿಗೆ ತಾನೆ ಸಾಧ್ಯ? ಇದೇ ನಟ್ಟ ಸಸಿಯನ್ನು ಕೀಳಬಹುದು; ತಾನೇ ಆಳವಾಗಿ ಬೇರೂರಿ ಬೆಳೆದ ಹೆಮ್ಮರವನ್ನು ಸಂಪೂರ್ಣವಾಗಿ ಕಿತ್ತೆಸೆಯಲು ಯಾರಿಗೆ ಶಕ್ಯ? ಒಮ್ಮೆ ಉದಯಿಸಿದ ಸೂರ್ಯನನ್ನು ಹಿಂದಿರುಗಿಸಲು ಯಾರ ಸಾಮರ್ಥ್ಯಕ್ಕೆ ಸಲ್ಲುವ ಮಾತು? "ಹುಟ್ಟುಗುಣ ಹುಗಿದರೂ ಹೋಗದು" ಎಂಬ

ಗಾದೆಯಂತೆ ಹುಟ್ಟನಿಂದಲೇ ಮಲ್ಲಿಕಾರ್ಜುನನಲ್ಲಿ ನಟ್ಟ ಅವಳ ಮನೋನಿಶ್ಚಲತೆಯನ್ನು ಸಡಲಿಸಲು ಅವಳ ತಾಯಿ-ತಂದೆಗಳಿಂದಲೂ, ಸಖಿಯರಿಂದಲೂ ಸರ್ವಥಾ ಸಾಧ್ಯವಾಗಲಿಲ್ಲ. (ಅಕ್ಕನಿಗೆ ಮಾತ್ರ ಮಲ್ಲಿಕಾರ್ಜುನನ ವ್ಯಸನವು ವಿಶೇಷವಾಗಿ ಹಬ್ಬಿತು. ಆತನ ವಿರಹ ಸಂತಾಪವು ಅವಳನ್ನು ಸದಾ ಬಾಧಿಸತೊಡಗಿತು. ಆತನಿಲ್ಲದೆ ಆತನ ದರ್ಶನವಾಗದೆ ಆಕೆಗೆ ಒಂದು ನಿಮಿಷವು ಒಂದು ವರುಷವಾಗಿ ಪರಿಣಮಿಸತೊಡಗಿತು. ಆ ವಿರಹ ವಿಹ್ವಲತೆಯನ್ನು ಸಹಿಸದೆ—

> "ಒಮ್ಮೆ ಕಾಮನ ಕಾಲ ಹಿಡಿವೆ. ಮತ್ತೊಮ್ಮೆ ಚಂದ್ರಮಂಗೆ ಸೆರಗೊಡ್ಡಿ ಬೇಡುವೆ. ಸುಡಲೀ ವಿರಹವ. ನಾನಾರಿಗೆ ಧೃತಿಗೆಡುವೆ? ಚನ್ನಮಲ್ಲಿಕಾರ್ಜುನ ದೇವನೆನ್ನನೊಲ್ಲದ ಕಾರಣ ಎಲ್ಲರಿಗೆ ಹಂಗಿತಿಯಾದೆನವ್ವಾ!" )

ಎಂದು ತನ್ನ ಆತ್ಮಸಖಿಯುಳೊಬ್ಬಳಿಗೆ ಹೇಳಿಕೊಳ್ಳಬೇಕು. ಆತನೊಲುಮೆಗಾಗಿ ನಾನು ಏನೇನೋ ಮಾಡಿದೆ; ಆದರೂ ಆತನೊಲಿಯಲಿಲ್ಲ. ಅದನ್ನು ಕಂಡು ಉಳಿದ ಗೆಳತಿಯರೆಲ್ಲರೂ ಹಂಗಿಸಿ ಹೀಯಾಳಿಸುವರು. ಎಂದು ಮರುಗಿ ಕೊರಗಬೇಕು; ಮತ್ತೆ ಮೊರೆಯಿಡಬೇಕು. ಆದರೂ ಆತನ ಮೊಗದೋರದಂತಾಗದೊಡನೆ ಸೈರಿಸದೆ ಸಂತೈಸಿಗೊಳ್ಳದೆ ತನ್ನ ಆಪ್ತಸಖಿಯ ಮುಂದೆ—

> "ಹೊಳೆವ ಜಡೆಯ ಮೇಲೆ ಎಳೆವೆಳೆದಿಂಗಳು. ಫಣಿಮಣಿ, ಕರ್ಣಕುಂಡಲದವ ನೋಡವ್ವ! ರುಂಡಮಾಲೆಯ ಕೊರಳವನ ಕಂಡರೆ ಒಮ್ಮೆ ಬರಹೇಳವ್ವ! ಗೋವಿಂದನ ನಯನ ಉಂಗುಟದ ಮೇಲಿಪ್ಪುದು. ಚನ್ನಮಲ್ಲಿಕಾರ್ಜುನ ದೇವನ ಕುರುಹವ್ವಾ!"

ಎಂದು ಆತನ ಕುರುಹನ್ನು ಹೇಳಿಟ್ಟಿರಬೇಕು. ಎಲೋ ಸಖಿಯೆ, ತಿರುಪಿಗಾಗಿ ತಲೆಯಲ್ಲಿ ಜಡೆಯ ಬಿಟ್ಟು, ಕಿವಿಯಲ್ಲಿ ಕಾಜಿನ ಕುಂಡಲವನಿಟ್ಟು, ಕೊರಳಲ್ಲಿ ಎಲ್ಲಿಯೋ ಬಿದ್ದ ನರಕಿಗಳ ಎಲುವುಗಳ ಮಾಲೆಯನ್ನು ಹಾಕಿಕೊಂಡು ಊರೂರು ಅಲೆಯುತ್ತ ಬರುವ ಸನ್ಯಾಸಿಗಳನ್ನೇನಾದರೂ

ಕಳಿಸಿಯಾ? ಆದ್ದರಿಂದ 'ಗೋವಿಂದನ ನಯನವೇ ಉಂಗುಟವಾಗಿರುವವ'ನೆಂದು ಕೊನೆಯ ಕುರುಹನ್ನು ನಿನಗೆ ಹೇಳಿದ್ದು. ಅದನ್ನು ಮಾತ್ರ ಮರೆಯಬೇಡ; ನೆನವಿನಲ್ಲಿಡು. ಅದು ಉಳ್ಳವನೇನಾದರೂ ಭೆಟ್ಟಿಯಾದರೆ ನನ್ನ ಮನೆಗೆ ಬರಹೇಳವ್ವಾ! ಇಲ್ಲವಾದರೆ ಬೇಡ. ಎಂದು ಅವಳ ಕಿವಿಯಲ್ಲಿ ನಸುದನಿಯಿಂದ ಹೇಳಿಕೊಳ್ಳಬೇಕು. ಸಂಜೆಯಾದುದರಿಂದ ಹೊರಟು ಮನೆಗೆ ಬರಬೇಕು.

ಹೀಗೆ ಹಗಲೆಲ್ಲ ಹಲುಬಿ ಹಲುಬಿಕೊಂಡರೂ ಆತನು ಆಕೆಗೆ ಕಾಣಿಸಿಗೊಳ್ಳುತ್ತಿರಲಿಲ್ಲ. ಹಗಲು ಹರಿದು, ಇರುಳು ಮುತ್ತಿಕೊಂಡರೂ ಆತನ ಹಂಬಲವನ್ನು ಅವಳು ಬಿಡುತ್ತಿರಲಿಲ್ಲ. ಮತ್ತೆ ಹೀಗೆ ಮೊರೆಯಿಡುವಳು– ಇದೇನು ದೇವಾ? ಎನ್ನ ಮನೋಭಾವ! ಆವಾಗಲೂ ನಿಮ್ಮ ನೆನಹಿನಲ್ಲಿಯೇ ಇದ್ದೇನೆ. ಇನಿತಾದರೂ ಮೈದೋರಲೊಲ್ಲೆ. ಒಮ್ಮೆಯಾದರೂ ಓ ಎನಲೊಲ್ಲೆ. ನಿಮಗೆ ನಾನಿಷ್ಟು ದೂರಾದೆನೆ? ನೀನೇ ಎನಗೆ ಗಂಡನಾಗಬೇಕೆಂದು ಬಾಲ್ಯದಿಂದಲೂ ನಿಮ್ಮನ್ನು ನಾನು ಆರಾಧಿಸಲಿಲ್ಲವೆ? ಸದ್ಗುರುವು ನೀವಿಬ್ಬರೂ ಅಗಲದೆ, ಯಾವಾಗಲೂ ಜೊತೆಯಾಗಿರಬೇಕೆಂದು ಬೋಧಿಸಲಿಲ್ಲವೆ? ಅದು ಇಷ್ಟರಲ್ಲಿಯೇ ಮರೆತುಹೋಯಿತೆ? ಹೇ ದೇವಾ! ನಿಮ್ಮನೊಡಗೂಡಿದ ಬಾಳಿನಲ್ಲಿ–ಕಳೆಗುಂದದ ಬೆಳಗಿದೆ, ಅಳಿಯದ ಆನಂದವಿದೆ ಎಂದು ಎಂದಿನಿಂದಲೂ ನಂಬಿಕೊಂಡು ಬಂದಿದ್ದೇನೆ. ಸಜ್ಜನರಾದರೂ ನಂಬಿ ನಚ್ಚಿ ಮೊರೆಹೊಕ್ಕವರನ್ನು ನೀವು ಪೊರೆವಿರೆಂದು ಸಾರುತ್ತಾರೆ. ನನ್ನ ನಂಬಿಗೆಯಲ್ಲಿ ಎನಾದರೂ ವಂಚನೆಯಿದೆಯೇ? ಹಾಗಾದರೆ ನಿನ್ನಾ ಚಲುವ ಮೊಗದೋರದಿರಲು ಕಾರಣವೇನು? ಹೇಳಲಾರೆಯಾ? ದೇವ! ನಿಮ್ಮ ಕೈಹಿಡಿಯಲು ಎನ್ನ ಮನ ಕಾತರಿಸುತ್ತದೆ. ಎನ್ನ ಹೃದಯ ಮಿಡಿಯುತ್ತದೆ. ಹೀಗೆ ಎನ್ನ ಹೃನ್ಮನಗಳು ಹಾತೊರೆದಷ್ಟು ನೀವು ದೂರ ಮರೆಯಾಗುತ್ತಿರುವಿರಿ. ಇದರ ರಹಸ್ಯವೇನು? ಎಂದು ಯೋಚನಾಪರವಶಳಾಗಬೇಕು. ಕೊನೆಗೆ ಆ ಯೋಚನೆಯಲ್ಲಿಯೇ ಏನೋ ತೋಚಿದಂತಾಗಿ ಫಕ್ಕನೆ ಎದ್ದು—

> "ಅರಿಸಿನವನೇ ಮಿಂದು, ಹೊಂದೊಡಿಗೆಯನ್ನೇ ತೊಟ್ಟು, ದೇವಾಂಗವನುಟ್ಟು ಪುರುಷ ಬಾರಾ! ನಿನ್ನ ಬರುವೆನ್ನ ಅಸುವಿನ ಬರುವು ಬಾರಯ್ಯ! ಚೆನ್ನಮಲ್ಲಿಕಾರ್ಜುನಯ್ಯಾ, ಬಂದಾನೆಂದು ಬಟ್ಟೆಗಳ ನೋಡಿ ಬಾಯಾರುತ್ತಿಹೆನು."

ನಾನು ಅಲಂಕಾರವಿಲ್ಲದೆ ಹೀಗೆ ಅಂದಗೇಡಿಯಾದುದಕ್ಕೇನಾದರೂ ಆತನು ಬಾರದಿರಬಹುದೆ? ಎಂದು ತನ್ನನ್ನು ಚನ್ನಾಗಿ ಅಲಂಕರಿಸಿಕೊಂಡು ಆತನ ಬರುವಿಗಾಗಿ ನೆನೆಯಬೇಕು; ಮತ್ತೂ ನೆನೆಯಬೇಕು. ಇನ್ನೂ ನೆನೆಯಬೇಕು. ತಾಯಿ–ತಂದೆಗಳು ಸಿಟ್ಟುಮಾಡಿದರೆ ಹೊರಗೆ ಬಂದು ಒಬ್ಬಳೇ ಕುಳಿತು ನೆನೆಯಬೇಕು. ಏನಾದರೂ ಆತನ ಸುಳುವಿಲ್ಲ. ಅವಳ ಆ ಮೃದು ಹೃದಯವು ವಿದೀರ್ಣವಾಗಿ ಹೋಗಿದೆ. ದುಃಖಾನುಕಂಪಗಳು ಉಕ್ಕಿ ಕಂಬನಿಯಾಗಿ ಹೊರಸೂಸತೊಡಗಿವೆ. ಅಷ್ಟರಲ್ಲಿ ಅವಳ ಆಪ್ತ ಸಖಿಯು ಭೆಟ್ಟಿಗಾಗಿ ಬರುವಳು. ಬಂದ ಸಖಿಯನ್ನು ನೋಡಿ ಕಣ್ಣೀರನೊರಸಿಗೊಂಡು ಸಖಿಯೆ! ಆತನೊಲುಮೆಗಾಗಿ ನೆನೆನೆನೆದು ನನ್ನ—

> "ಕಳವಳದ ಮನವು ತಲೆ ಕೆಳಗಾದುದವ್ವಾ! ಸುಳಿದು ಬೀಸುವ ಗಾಳಿ ಉರಿಯಾಯಿತ್ತವ್ವಾ! ಬೆಳದಿಂಗಳು ಬಿಸಲಾಯಿತ್ತು ಕೆಳದಿ! ಹೊಳಲು ಸುಂಕಿಗನಂತೆ ತೊಳಲುತ್ತಿದೆನವ್ವಾ! ತಿಳುಹಾ ಬುದ್ಧಿಯ. ಹೇಳಿ ಕರತಾರೆಲಗವ್ವಾ! ಚೆನ್ನಮಲ್ಲಿಕಾರ್ಜುನಂಗೆ ಎರಡರ ಮುನಿಸವ್ವಾ!"

ಎಂದು ತನ್ನ ಕಷ್ಟವನ್ನು ಕೆಳದಿಗೆ ಹೇಳಿಕೊಳ್ಳಬೇಕು. ಅದಕ್ಕವಳು ತನಗೆ ತಿಳಿದಮಟ್ಟಿಗೆ ಏನೇನೋ ಸಮಾಧಾನವನ್ನು ಹೇಳಿ ಹೊರಟು ಹೋಗಬೇಕು. ಇವಳಿಗೆ ಮಾತ್ರ ಅದರಿಂದ ಸಮಾಧಾನವಿಲ್ಲ; ಶಾಂತಿಯಿಲ್ಲ. ವಿರಹದ ಅಲಗು ಮಾತ್ರ ಅವಳ ಮನಸ್ಸನ್ನು ಕೊರೆಯುತ್ತಲೇ ಆದೆ. ಒಬ್ಬಳೇ ಎಷ್ಟೋ ಹೊತ್ತು ಕೂತು ಕೂತು ಬೇಸತ್ತು ಒಳಗೆ ಹೋಗಿ ತಾಯಿಗೆ ಹೀಗೆ ಹೇಳಬೇಕು. ಎಲೆ ಅವ್ವಾ!

"ಬಂದಿಹನೆಂದು ಬಟ್ಟೆಯ ನೋಡಿ ಬಾರದಿರ್ದಡೆ ಕರಗಿ ಕೊರಗಿ
ದೆನವ್ವಾ! ತಡವಾದಡೆ ಬಡವಾದೆ ತಾಯೆ ಚನ್ನಮಲ್ಲಿಕಾರ್ಜುನನ
ಬಂದಿರುಳಗಲಿದಡೆ ತಕ್ಕೆ ಸಡಲಿದ ಜಕ್ಕಪಕ್ಕಿಯಂತಾದೆನವ್ವಾ!"

ಎಂಬುದಾಗಿ ತಾಯಿಯ ಎದುರಿಗೆ ತನ್ನ ದುಃಖವನ್ನು ತೋಡಿಕೊಳ್ಳಬೇಕು. ಆ ಮಾತಿಗೆ ತಾಯಿಯು– ಮಗಳೇ, ನೀನು ಹುಚ್ಚಿ. ಕಾಣದ ಆ ದೇವನಲ್ಲಿ ನೀನಿಟ್ಟ ಈ ಮೆಚ್ಚಿಗೆ ಉಸುಬಿನಲ್ಲಿ ತೈಲವನರಸಿದಂತೆ! ನಾನೆಷ್ಟು ಹೇಳಿದರೂ ಕೇಳಲಾರಿ. ನಿನ್ನ ಹಟ ನೀ ಬಿಡಲಾರಿ. ನಿನ್ನ ಈ ಹುಚ್ಚುತನಕ್ಕೆ ನಾವೇನು ಸಾಯೋಣ! ಸಾಕು ನಡೆ, ಉಂಡು ಮಲಗಿಕೋ! ಹೊತ್ತು ಮೀರಿಹೋದರೂ ನಿನ್ನ ಹಾಳು ಕಾಟ ತೀರಲಿಲ್ಲ ಎಂದು ಬೈಯ್ದು ಸುಮ್ಮನಾಗುವಳು. ಅಕ್ಕನಿಗೆ ಮಾತ್ರ ತೃಪ್ತಿಯಿಲ್ಲ. ಅವಳಿಗೆ ಅನ್ನದಲ್ಲಿ ಆಶೆಯಿಲ್ಲ ನಿದ್ದೆಯಲ್ಲಿ ಸುಖವಿಲ್ಲ. ಆದರೂ ತಾಯಿ-ತಂದೆಗಳ ಕಾಟಕ್ಕಾಗಿ ಕಣ್ಣೀರು-ಕೈದುತ್ತು ಒಂದಾಗಿ ಒಂದೆರಡು ತತ್ತು ಉಣ್ಣುವಳು. ಬಂದು ಹಾಸಿಗೆಯ ಮೇಲೆ ಸುಮ್ಮನೆ ಒರಗಿಕೊಳ್ಳುವಳು. ಅವಳ ಕಣ್ಣಲ್ಲಿ ನಿದ್ದೆಯಿಲ್ಲ; ಮನದಲ್ಲಿ ಶಾಂತಿಯಿಲ್ಲ. ಮನಸ್ಸನ್ನು ಮಾರುಗೊಂಡ ಮಲ್ಲಿಕಾರ್ಜುನನು ಅದನ್ನು ತಾಂಡವವಾಡ ಹಚ್ಚಿದ್ದಾನೆ. ಅವಳು ಒರಗಿಕೊಂಡೇ– ಎನ್ನಾಳ್ದನೆ, ನಿನಗಾಗಿ ನನ್ನ ಎಲ್ಲ ಗೆಳತಿಯರ ಹಂಗಿತಿಗೊಳಗಾಗದೆ. ತಂದೆ–ತಾಯಿಗಳ ಬೇಸರಕ್ಕೆ ಆಸರಾದೆ. ಊರ ಜನರ ನಿಂದೆಗೆ ಪಾತ್ರಳಾದೆ. ಆದರೂ ನೀನು ಮೈದೋರದಾದೆ. ಇಷ್ಟೊಂದು ಕಠಿಣಾತ್ಮನಾದ ನೀನು ಕರುಣಾಕರ, ದಯಾಸಾಗರ, ಭಕ್ತವತ್ಸಲ ಎಂಬ ಬಿರುದುಗಳನ್ನು ಹೇಗೆ ಪಡೆದೆ? ಎಂದು ಮುಂತಾಗಿ ಏನೇನೋ ಯೋಚನೆಗಳು ಒಂದರ ಹಿಂದೊಂದು ಅವಳ ಮನಸಿನ ಮೇಲೆ ಬಂದು ಬಂದು ಮಾಯವಾಗಹತ್ತಿವೆ. ತಾಯಿ-ತಂದೆಗಳು ನಿದ್ರೆಹೋದರೂ ಅವಳಿಗೆ ನಿದ್ರೆ ಬಾರದಾಗಿದೆ. ಆತನ ಮುಖಮುದ್ರೆ ಒಮ್ಮೆಯಾದರೂ ತೋರದಾಗಿದೆ. ಹೀಗೆ ಅಕ್ಕನು ಚಿಂತೆಯೇ ತಾನಾಗಿ ಹೋಗಿದ್ದಾಳೆ. ಅಷ್ಟರಲ್ಲಿ ಗುಡುಗಿಗಿಂತ ಮಿಗಿಲಾದ ಧ್ವನಿಯೊಂದು ಅವಳಿಗೆ ಕೇಳಿಸುವುದು. ಅಕ್ಕನು ಅದನ್ನು ಆಲಿಸಿ

ಕೇಳುವಳು. ಆ ವಾಣಿಯು ತನ್ನ ಘನಘೋರವಾದ ಧ್ವನಿಯಿಂದ "ಏಕೆ ಹಂಬಲಿಸುವಿ?" ಎಂದು ಹೇಳಿದ ಹಾಗಾಯಿತು. ಹಾಗೆಯೇ ಏಳುವಳು ಎದ್ದು ಹೊರಗೆ ಬರುವಳು. ಯಾರೂ ಇಲ್ಲ. ನೀರವವಾದ ವಾತಾವರಣವು ತಾನೇ ತಾನಾಗಿ ಎಲ್ಲೆಲ್ಲೂ ಹಬ್ಬಿಕೊಂಡಿದೆ. ಜಗತ್ತನ್ನೇ ತಬ್ಬಿಕೊಂಡ ಆ ನಿಶಾಮಯ ವಿಶ್ವದಲ್ಲಿ ಕಳೆದುಕೊಂಡ ತನ್ನ ಪ್ರೇಮದ ಜಿಂಕೆಯನ್ನು ಹುಡುಕಲೋಸುಗೋ ಏನೋ ಎಂಬಂತೆ ಚಂದಿರನು ಅದೇ ಉದಯಿಸಿ ಮಸಕು ಮಸಕಾದ ತನ್ನ ಕಿರಣಕರಗಳನ್ನು ಹರಡಿದ್ದಾನೆ. ಪ್ರಕೃತಿದೇವಿಯು ಪವಡಿಸಿ ನಿದ್ರೆ ಹೋಗುವ ಸಮಯ-ಆಗ ತಾನೊಬ್ಬಳೇ ಮನೆಯ ಹೊರಗೆ ನಿಂತು ಸುತ್ತಲೂ ಒಮ್ಮೆ ತನ್ನ ದೃಷ್ಟಿಯನ್ನು ಚಲ್ಲಿದ್ದಾಳೆ. ಎಲ್ಲೆಲ್ಲೂ ನಿರ್ಜನ. ಎತ್ತೆತ್ತ್ತೂ ನಿಶ್ಯಬ್ದ. ಎದುರಿಗೆ ಒಂದು ಮಾಮರವು ಮಾತ್ರ ಕಂಡಿದೆ. ಮಧುಮಾಸ. ಮನೆಯ ಮುಂದಿನ ಆ ಮಾಮರವು ಚಿಗುರಿ ತುಂಬಾ ಹೂತಿದೆ. ಅದರ ವಾಸನೆಗೆ ಅಳಿಸಂಕುಳವು ಬಂದು ಮುತ್ತಿಕೊಂಡಿವೆ. ತಳಿರಿಗೆಂದು ಕಳಕಂಠವು ಬಂದು ವಾಸವಾಗಿದೆ. ಅವನ್ನು ಅಕ್ಕನು ಮತ್ತೊಮ್ಮೆ ದಿಟ್ಟಿಸಿ ನೋಡಿ, ಆಗಳೆ ಕೂಗಿ ಹೇಳಿದವರನ್ನು ಕಾಣಬೇಕೆಂಬ ಕುತೂಹಲದಿಂದ–

> "ಅಳಿಸಂಕುಳವೆ, ಮಾಮರನೆ, ಬೆಳದಿಂಗಳೆ, ಕೋಗಿಲೆಯೆ,
> ನಿಮ್ಮ ನಿಮ್ಮನೆಲ್ಲರನೂ ಒಂದು ಬೇಡುವೆನು. ಎನ್ನೊಡೆಯ
> ಚೆನ್ನಮಲ್ಲಿಕಾರ್ಜುನ ದೇವರ ಕಂಡರೆ ಕರೆದು ತೋರಿರೆ!"

ಎಂದು ಅವನ್ನು ಕೇಳುತ್ತಾಳೆ. ಸರ್ವಭರಿತರಾದ ಶಿವನನ್ನು ಇವೂ ಕಂಡಿರಬಹುದೆಂದು ಅವಳ ಭಾವನೆ. ಆದರೆ ಮಾತಾಡದ ಆ ಮೂಕಅಜ್ಞ ಪ್ರಾಣಿಗಳು ಅವಳಿಗೇನು ಉತ್ತರ ಕೊಡಬಲ್ಲವು? ನಿರುತ್ತರಳಾಗಿ ಹಾಗೆಯೇ ಸ್ವಲ್ಪಹೊತ್ತು ನಿಂತಿದ್ದಾಳೆ. ನಂತರ ದೊಡ್ಡದೊಂದು ನಿಟ್ಟುಸಿರಿಟ್ಟು—

> "ಬಂಜೆ ಬೇನೆಯನರಿಯುಳು. ಬಲದಾಯಿ ಮುದ್ದು ಬಲ್ಲಳೇ?
> ನೊಂದನೋವ ನೋಯದವರೆತ್ತ ಬಲ್ಲರು? ಚೆನ್ನಮಲ್ಲಿಕಾ
> ರ್ಜುನ! ನೀನಿರಿದ ಅಲಗು ಒಡಲಲ್ಲಿ ಮುರಿದು ಹೊರ
> ಳುವಳ............"

ಎಂದು ಆರೆಮಾತಿನಲ್ಲಿಯೇ ಕಂಬನಿದುಂಬಿ, ಶಿರವುಬ್ಬಿ ಕಂಠದಿಂದ ಮಾತು ಹೊರಬೀಳದಂತಾಗುತ್ತದೆ. ಕಣ್ಣೀರು ಧಾರೆಗಟ್ಟಿ ಸುರಿಯ ತೊಡಗಿವೆ ಆಗ ಸಂತವಿಸುವರಾರು? ಸಲಿಗೆಯಿಂದ ಸವಿನುಡಿಯಾಡಿ 'ಇಂದಿಲ್ಲ ನಾಳೆ ತಾನೇ ಬೈದೋರುವನು; ಇದಕ್ಕೇಕೆ ಇಷ್ಟೊಂದು ಚಿಂತೆ?' ಎಂದು ಭರವಸೆಯನ್ನು ಹೇಳಿ ಕಳಿಸುವವರಾರು? ಕೊನೆಗೆ ತಾನೇ ಹೇಗೋ ಸೈರಿಸಿಗೊಂಡು, ವಿರಹ ಸಂತಾಪವನ್ನು ನುಂಗಿಕೊಂಡು ನಿರುಪಾಯಳಾಗಿ ಒಳಗೆ ಬಂದು ಪುನಃ ತನ್ನ ಹಾಸಿಗೆಯ ಮೇಲೆ ಅದೇ ಧ್ಯಾನದಲ್ಲಿಯೇ ಒರಗಿಕೊಳ್ಳುವಳು. ಕಾಲಹೋದಂತೆ ಧ್ಯಾನದಲ್ಲಿಯೇ ಕಣ್ಮುಚ್ಚುವಳು. ಆದರೆ ಅದು ಎಂತಹ ನಿದ್ರೆಯೋ ಯಾರು ಬಲ್ಲರು.

ಬೆಳಗಾಗಿದೆ. ಲೋಕದ ಚೇಷ್ಟೆಗೆ ಕಾರಣನಾದ ಸಹಸ್ರಕಿರಣನು ಉದಯಾಚಲವನ್ನು ಏರಿದ್ದಾನೆ. ತನ್ನ ನಳನಳಿಸುವ ಎಳೆ ಹೊಂಬೆಳಗನ್ನು ಎಲ್ಲೆಲ್ಲಿಯೂ ಚಲ್ಲಿದ್ದಾನೆ. ಆ ಹೊಂಬೆಳಗಿನಲ್ಲಿ ಹಕ್ಕಿಗಳು ಹಾಡಿ ಹರುಷಗೊಳ್ಳುತ್ತಿವೆ. ತರು-ಮರಗಳು ತಲೆದೂಗಿ ತೊನೆಯುತ್ತಿವೆ. ಹೂವುಗಳು ಅರಳಿ ಕುಲುಕುಲು ನಗುತ್ತಿವೆ. ಎಲ್ಲ ಜಗತ್ತೂ ಎದ್ದು ವ್ಯವಹಾರಕ್ಕೆ ತೊಡಗಿದೆ. ಆಗ ನಮ್ಮ ಮಾದೇವಿಗೂ ಥಟ್ಟನೇ ಎಚ್ಚರಾಗಿದೆ. ಎದ್ದು ವಿಸ್ಮಯ-ಆಶ್ಚರ್ಯಗಳಿಂದ—

"ಅಕ್ಕ ಕೇಳವ್ವ, ಅಕ್ಕಯ್ಯ ನಾನೊಂದು ಕನಸು ಕಂಡೆ. ಅಕ್ಕಿ ಯಡಿಕೆ ತೆಂಗಿನಕಾಯ ಕಂಡೆ. ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲ ಗೊರವನು ಭಿಕ್ಷಕ್ಕೆ ಬಂದುದ ಕಂಡೆನವ್ವಾ! ಮಿಕ್ಕು ಮೀರಿ ಹೋಹನ ಬೆಂಬತ್ತಿ ಕೈವಿಡಿದೆನು. ಚನ್ನಮಲ್ಲಿಕಾರ್ಜುನನ ಕಂಡು ಕಣ್ದೆರೆದೆನು."

ಎಂಬುದಾಗಿ ತನ್ನ ಅಕ್ಕನಿಗೆ ತನ್ನ ಸ್ವಪ್ನವನ್ನು ಹೇಳಿಕೊಂಡು ಸಂತೋಷ ಬಟ್ಟಳು. ಅಕ್ಕನು ಮಲಗಿದಾಗಲೂ ಆತನದೇ ಸ್ವಪ್ನ. ಆತನದೇ ಕನವರಿಕೆ. ಅವಳ ನಿದ್ದೆ ಈ ತೆರನಾಗಿತ್ತು. ಅಂತು ಕನಸಿನಲ್ಲಿಯಾದರೂ ಕಂಡು ಕೈಹಿಡಿವಳು. ಮಲಗುವ ಮೊದಲು ಕೂಗಿಹೋದವನು

ಮಲಗಿದ ಮೇಲೆ ಕನಸಿಗೆ ಬಂದನು. ಕುತೂಹಲವನ್ನು ಹೆಚ್ಚಿಸಿದನು. ಇನ್ನೇನು ? ಕನಸಿಗೆ ಬಂದವನು ನನಸಿಗೆ ಬಾರನೆ ? ಎಂದು ಧೈರ್ಯ ಪಟ್ಟಳು. ಆದರೂ ಅವಳು ಸುಮ್ಮನಿರಲಿಲ್ಲ.

"ಉದಯದಲೆದ್ದು ನಿಮ್ಮ ನೆನೆವೆನಯ್ಯಾ. ನಿಮ್ಮ ಬರವ ಹಾರು ತಿರ್ದೆನಯ್ಯಾ. ಹಸೆ ಹಂದರವನಿಕ್ಕಿ ನಿಮ್ಮ ಬಗಳಿಗೆದೆಮಾಡಿ ಕೊಂಡಿಪ್ಪೆನಯ್ಯಾ !..........."

ಎಂದು ಸಖಿಯರೊಡಗೂಡಿ ಮನೆ ಕಟ್ಟೆಯಮೇಲೆ ಹಾಡಿಕೊಳ್ಳುತ್ತಿರು ವಳು.

---

## ಕೌಶಿಕನ ಕಣ್ಣು.

---

ಮಲ್ಲಿಕಾರ್ಜುನನಲ್ಲಿ ತಲ್ಲೀನಳಾದ, ಮೂಜಗವನ್ನೇ ಮೋಹಗೊ ಳಿಸುವ ಅಕ್ಕನನ್ನು ಅಂದು ಊರೊಳು ವೈಹಾಳಿಗೆ ಬಂದ ಕೌಶಿಕನು ಕಾಣುವನು. ಅದ್ವಿತೀಯವಾದ ತಾರುಣ್ಯ-ಲಾವಣ್ಯಗಳಿಂದೊಡಗೂಡಿ ಒಪ್ಪುವ ಅವಳನ್ನು ಕಂಡು ಆತನು ಮಾರನ ಅರಳಂಬಿಗೆ ತುತ್ತಾಗದಿ ರುವದೆಂತು ? ಆಯಿತು. ಆಳುತನದ ಮದವುಳ್ಳ ಆ ಕೇಳುಮನಸಿನ ಅರಸನು ಅವಳ ಕೈ ಹಿಡಿದು ಅವಳೊಡನೆ ತನ್ನ ಸಂಸಾರದ ಸುಖವನ್ನು ಯಥೇಷ್ಟವಾಗಿ ಪಡೆಯಬೇಕೆಂದು ಬಗೆದನು. ದಿನಗಳು ಕಳೆದಂತೆ ಅರಸನಿಗೆ ಬಯಕೆ ಬಲವಾಯ್ತು. ಯಾವಾಗಲೂ ದೇವಿಯೊಡನೆ ಕಾಲಕಳೆಯಬೇಕು, ಸ್ನೇಹದ ನುಡಿಗಳನ್ನೂ, ಸರಸ-ಸಲ್ಲಾಪಗಳನ್ನೂ ಅವಳೊಡನಾಡಬೇಕು, ಅವಳ ದಿವ್ಯವಾದ ಅಂಗಸ್ಪರ್ಶಸುಖವು ಸಂಪ್ರಾ

ಪ್ತವಾಗಬೇಕು. ಅವಳ ಲೋಕೋತ್ತರವಾದ ಸೌಂದರ್ಯ, ಸಂಭ್ರಮದ ವಿಲಾಸ, ಮೋಹಿಸುವ ಹಾವ-ಭಾವ, ಹೃದಯವನ್ನು ಸೆರೆಹಿಡಿವ ಆ ಅರೆನೋಟ, ಮುಗುಳುನಗೆ, ಮುದ್ದು ಮಾತು ಇವುಗಳ ಸೊಬಗನ್ನು ದಿನದಿನವೂ ಅನುಭವಿಸಬೇಕು. ಎಂದು ಆತನ ಮನಸ್ಸು ತೀವ್ರವಾಗಿ ಹರಿಯುತ್ತೊಡಗಿತು. ಅದಕ್ಕಾಗಿ ತನ್ನ ಶಕ್ತಿಮೀರಿ ಯತ್ನಮಾಡಿದನು. ಆದರೇನು? ಅದರಿಂದ ಅವನು ಯಶಸ್ವಿಯಾಗಲಿಲ್ಲ. ದಂಡನೀತಿಯಿಂದ ದೋರ್ಬಲದಿಂದ ಒಂದು ರಾಜ್ಯವನ್ನೇ ಆಳುವ ಆಳುಕಿನಲ್ಲಿದ್ದುವ ಆ ಅರಸನು, ಅನೀತಿಯಿಂದ ಆತ್ಮಬಲಹೀನತೆಯಿಂದ ಒಬ್ಬ ಅಬಲೆಯನ್ನು ಸಹ ಆಳದಷ್ಟು ಆಳುಕಿಸದಷ್ಟು ಅಬಲನಾದನು. ಆಶಾಹೀನನಾದನು. ಸತ್ಯಮಾರ್ಗಕ್ಕೆ ಎಲ್ಲಿಯೂ ಸೋಲೆಂಬುದಿಲ್ಲ. ಆ ಮಾರ್ಗ ಶಾಶ್ವತವಾದುದು. ಅಂತಹ ಆ ಆತ್ಮಬಲಕ್ಕೆ ಇಂತಹ ಕ್ಷಾತ್ರ ಬಲವು ತಲೆ ತಗ್ಗಿಸಲೇಬೇಕು.

ಆತ್ಮರತಿಯಲ್ಲಿ ಬೆರೆದು ವೀರವಿರತೆಯಾದ ಅವಳಿಗೆ ಈ ಸ್ವಪ್ನವು ಯುವಾದ ಸಾಮ್ರಾಜ್ಯಭೋಗದ ತೃಷ್ಣೆಯು ಎಳ್ಳಷ್ಟೂ ಇರಲಿಲ್ಲ. ಹರನೇ ಗಂಡನಾಗಬೇಕೆಂದು ಅನಂತಕಾಲ ತಪಸಿದ ತಾಯಿಯು ಕೌಶಿಕನಂತಹ ರಾಜನಿಗೆ ಬಾಯ್ನೀರು ಕರೆಯಬೇಕಾಗಿರಲಿಲ್ಲ. ಅವಳಿಗೆ ಅರಸುಮನೆತನದ ಅರಸಿಯಾಗುವ ಕುಲಫಲವೂ, ಬಲವೊಲವೂ ಇದ್ದಿರಲಿಲ್ಲ. ಅವೆಲ್ಲ ಅವಳಿಗೆ ತೃಣಪ್ರಾಯವಾಗಿದ್ದವು.

"ಅಯ್ಯಾ ಮಾಲಾಹಂಕಾರವಿಡಿದು, ಕುಲಭ್ರಮೆ, ಛಲಭ್ರಮೆ,
ಜಾತಿಭ್ರಮೆ, ನಾಮವರ್ಣಾಶ್ರಮ ಮತಶಾಸ್ತ್ರಭ್ರಮೆ, **ರಾಜ್ಯ
ಭ್ರಮೆ**‡ ಧನಧಾನ್ಯ-ಪುತ್ರ ಮಿತ್ರ-ಐಶ್ವರ್ಯ ತ್ಯಾಗ-ಯೋಗ
ಭ್ರಮೆ, ಕಾಯಕರಣ ವಿಷಯಭ್ರಮೆ, ವಾಯು ಮನ ಭಾವ
ಜೀವಭ್ರಮೆ, ನಾಹಂ ಕೋಹಂ ಭ್ರಮೆ, ಶಿವೋಹಂ ಭ್ರಮೆ,

---

‡ ರಾಜ್ಯಭ್ರಮೆಯುಳ್ಳವರನ್ನೂ ಸಹ ಕಾಣಲು ನಾಚುವ ಅಕ್ಕನನ್ನು ರಾಜ್ಯವನ್ನೇ ಆಳಲು ಹಚ್ಚಿದ್ದಾನೆ ಚೆನ್ನಬಸವಾಂಕನು. ಇದನ್ನು ಒಪ್ಪಬಹುದೆ?

ಮಾಯಾ ಮೋಹ ಭ್ರಮೆ, ಮೊದಲಾದ ಮೂವತ್ತೆರಡು ಪಾಶಾಭ್ರಮಿತರಾಗಿ ತೊಳಲುವ ವೇಷಧಾರಿಗಳ ಕಂಡು...... ಎನ್ನ ಮನ ನಾಚಿ ನಿಮ್ಮಡಿಗಭಿಮುಖವಾಯಿತ್ತಯ್ಯ ಚೆನ್ನಮಲ್ಲಿಕಾರ್ಜುನ."

ಇಂತೆಲ್ಲ ಭ್ರಮಿತರನ್ನೇ ನೋಡದ ನುಡಿಸದ ಅಕ್ಕನು ರಾಜಭೋಗಕ್ಕೆ ಮನಸ್ಸು ಮಾಡುವಳೇ? ಆಗದು; ಎಂದಿಗೂ ಆಗದು. ಆ ಕಾರಣದಿಂದಲೇ ಅವಳು ಕೌಶಿಕದೊರೆಯ ಸಾಮ್ರಾಜ್ಯ ಸೌಖ್ಯವನ್ನು ಮನವೆಳಸಿ ಬಯಸದೆ, ಕಣ್ಣೆತ್ತಿ ನೋಡದೆ ಕಾಲಿನಂಗುಟದಿಂದ ತಳ್ಳಿಬಿಟ್ಟಳು; ತೂರಿಬಿಟ್ಟಳು. ಅವಳು ಅಂಗದಿಂದ ಅಬಲೆಯಾಗಿದ್ದರೂ ಆತ್ಮಬಲದಿಂದ ಸಬಲೆಯಾಗಿದ್ದಳು, ಗಂಡುರೂಪಾಗಿದ್ದಳು. ಅಂತಹ ಆತ್ಮವೀರಳ ಕೆಚ್ಚೆದೆಯ ಮುಂದೆ ಕೌಶಿಕ (ಗೂಬೆ) ಬಂದರೇನು? ಕೇಸರಿ ಬಂದರೇನು?

ಭವಿಯಾದ ಕೌಶಿಕ ದೊರೆಯನ್ನು ಕಣ್ಣೆತ್ತಿ ನೋಡದ ಮಾದೇವಿಯನ್ನು ಕುರಿತು ಸುಮತಿಯು—ಮಗಳೇ! ಭವಿಯನೊಲ್ಲದಿದ್ದರೆ ಭಕ್ತನನ್ನಾದರೂ ಮದುವೆಯಾಗು. ಹೆಣ್ಣುಮಕ್ಕಳಿಗೆ ಪತಿಯೇ ಪರದೈವ. ಹೆಂಗೂಸಿನ ಭಾವೀ ಜೀವನರಥ ಸಂಚಾಲನಕ್ಕೆ ಮಹಾರಥಿಕ. ಮಾದೇವಿ! ನಾವೆಷ್ಟುದಿನ ಬದುಕುವವರು. ನಾವಿರುವವರೆಗೂ ನಿನ್ನ ರಕ್ಷಣೆ. ಆಮೇಲೆ ಅನಾಥೆಯಾದ ನಿನ್ನನ್ನು ಯಾರು ನೋಡುವರು? ಅಬಲೆಯಾದ ನೀನು ನಿನ್ನನ್ನು ಹೇಗೆ ರಕ್ಷಿಸಿಗೊಳ್ಳಬಲ್ಲೆ? ಗಂಡನಿದ್ದರೆ ನಿನ್ನ ಹೊಟ್ಟೆ ಬಟ್ಟೆಗಳನ್ನು ನೋಡುವನು. ನಿನ್ನ ಸುಖ-ದುಃಖಗಳಿಗೆ ತನ್ನ ಹೆಗಲ ಕೊಡುವನು. ನಿನ್ನ ಆಗ-ಹೋಗುಗಳಿಗೆ ಅವನೂ ಭಾಗಿಯಾಗುವನು. ಆದ್ದರಿಂದ ಗಂಡನಿಲ್ಲದಿರುವುದು ನಿನಗೆ ಎಷ್ಟುಮಾತ್ರಕ್ಕೂ ಉಚಿತವಲ್ಲವಮ್ಮ. ಹೇಳುವದನ್ನು ಕೇಳು. ನೀನೊಪ್ಪುವ ಒಳ್ಳೇ ಭಕ್ತನನ್ನೇ ಹುಡುಕಿ ಕೊಡುತ್ತೇವೆ. ಎಂದು ಉಪದೇಶ ಮಾಡುವಳು. ಅದನ್ನು ಕೇಳಿ ಅಕ್ಕನು-ತಾಯಿ, ಈ ನಿನ್ನ ಹೆದರಿಕೆಯ ಮಾತಿಗೆ ನಾನಂಜುವವಳಲ್ಲ; ಅಳಕುವವಳಲ್ಲ. ಮುಂದಿನ ಜೀವನ ವಿಚಾರದ

ಮಾತಂತಿರಲಿ, ಇಂದೇ ನನ್ನ ಜೀವನದ ಹಂಗು ನನಗಿಲ್ಲ. ತನುಗಿಲ್ಲದ ಈ ಲೋಕದ ಗಂಡರು ನನಗೇನು ಕೊಡಬಲ್ಲರು? ಮುಂದೆ ಅವರು ಕೊಡುವದಿರಲಿ, ನೀವೀಗ ಕೊಡುವ ಅನ್ನ-ಬಟ್ಟೆಗಳೂ ಬೇಡ; ವಸತಿ-ವಸ್ತುಗಳೂ ಬೇಡ. "ಹಸಿವಾದಡೆ ಭಿಕ್ಷಾನ್ನಗಳುಂಟು. ತೃಷೆಯಾದಡೆ ಕೆರೆ ಹಳ್ಳ-ಭಾವಿಗಳುಂಟು. ಶಯನಕ್ಕೆ ಹಾಳುದೇಗುಲಗಳುಂಟು. ಚನ್ನ ಮಲ್ಲಿಕಾರ್ಜುನಯ್ಯ ಎನ್ನ ಆತ್ಮಸಂಗಾತಕ್ಕುಂಟು." ಇದೋ ತೆಗೆದುಕೋ ನಿನ್ನ ಬಟ್ಟೆಗಳನು; ಉಚ್ಚಿಕೋ ನಿನ್ನ ಅಲಂಕಾರಗಳನು. ಎಂದು ಆ ಚಣದಲ್ಲಿಯೇ ಉಟ್ಟ ಉಡಿಗೆಯನ್ನೂ, ತೊಟ್ಟ ತೊಡಿಗೆಗಳನ್ನೂ ತೆಗೆದೊಗೆನು ಲಗ್ನಕ್ಕೆ ಒಪ್ಪದೆ ನಗ್ನಳಾಗಿ-ತಾಯಿ-ತಂದೆಗಳಿರಾ! ಆ ದೇವನು ಈ ಉಡುಪು-ತೊಡುಪುಗಳಿಗೆ ಒಲಿಯುವವನಲ್ಲ. ಈ ಮನೆ ಮಾರುಗಳಿಗೆ ಮಾರುಗೊಳ್ಳುವವನಲ್ಲ. ಆತನೊಲಿವ ಚಲುವಿಕೆಯೇ ಬೇರೆ. ಈ ಬಾಹ್ಯಚಲುವಿಕೆಯು ಆತನಿಗೆ ಬೇಡ. ಆತನಿಗೆ ಬೇಕಾದುದು ಪರಿಶುದ್ಧವಾದ ಅಂತರಂಗ. ಅದನ್ನು ಆತನಿಗೆ ಎಂದೋ ಒಪ್ಪಿಸಿಬಿಟ್ಟಿದ್ದೇನೆ. ಆತನು ನನ್ನ ಅಂತರಂಗದ ನಲ್ಲನು ಎಂದೋ ಆಗಿಹೋಗಿದ್ದಾನೆ. ಇಂದು ಆತನನ್ನು ಮರೆತು ಈ ಲೋಕದ ಗಂಡರಿಗೆ ನನ್ನ ತನುಮನಗಳನ್ನು ನೀಡಲಾರೆ. ಹಾಗೆ ಮಾಡಿದರೆ ಆತನ ವಿಷಯದಲ್ಲಿ ನಾನು ಅಪಾರವಾದ ಅಪರಾಧವನ್ನು ಮಾಡಿದಂತಾಗುವದಿಲ್ಲವೆ? ಮೊದಲೊಪ್ಪಿ ಮಾಡಿಕೊಂಡವನನ್ನು ಈಗ ಬಿಡುವದು ಅನ್ಯಾಯವಲ್ಲವೆ? ಆದ್ದರಿಂದ ನಿಮ್ಮ ಪಾದಕ್ಕೆ ಶರಣು. ಹೊರಡುವೆ. ಆತನಿಗೊಲಿದ ನನಗೆ ಇವುಗಳಲ್ಲಿ ಮನಸ್ಸಿಲ್ಲ. ನನಗಿನ್ನೀ ಉಡುಪಿನ ಆಶೆ ಬೇಡ; ಮನೆಯ ವಾಸವೂ ಬೇಡ. ವನಕ್ಕೆ ತೆರಳುವೆ. ಆ ಮಲ್ಲಿಕಾರ್ಜುನನ ಮನೆಗೆ ಹೋಗುವೆ ಎಂದು ಹೇಳಿ ಹೊರಹೊರಡುವಳು. ನಗ್ನಳಾಗಿ ಹೋಗುವ ತನ್ನ ಮಗಳನ್ನು ನೋಡಿ ತಾಯಿ ಸಹಿಸದೆ, ಓಡಿಬಂದು ಮಗಳನ್ನು ತನ್ನ ಬಾಹುಗಳಿಂದ ತಬ್ಬಿಕೊಂಡು, ಎನ್ನ ಪ್ರಾಣದ ಹಕ್ಕಿಯೇ ಹೋಗಬೇಡ. ನಿನ್ನನು ಕಳೆದುಕೊಂಡು ನಾನು ಜೀವಿಸಲಾರೆ. ನಾವಿರಲು ಹೀಗೆ ನಗ್ನಳಾಗಿ ಹುಚ್ಚಿಯಂತೆ ಹೊರಟುಹೋದರೆ ಊರ ಜನರೆಲ್ಲರೂ

ನನ್ನನ್ನು ಆಡಿಕೊಳ್ಳದೆ ಬಿಡುವರೆ? ಮಗಳೆ! ಮುದ್ದುಮಗಳೆ! ಬೇಡ, ಹೀಗೆ ಮಾಡಬೇಡ ಎಂದು ಕಣ್ಣೀರಿಡುವಳು. ಅಕ್ಕನು ಆ ತಾಯಿಯ ಮೋಹದ ನೋವಿಗೆ ಸಿಲ್ಕದೆ, ಎಲೆ ಅವ್ವಾ!

> "ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದಡೆಂತವ್ವಾ! ಸಮುದ್ರದ ತಡಿಯಲಿ ಮನೆಯ ಮಾಡಿ ನೆರೆ ತೊರೆಗಳಿಗಂಜಿದಡೆಂತವ್ವಾ! ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತವ್ವಾ! ಲೋಕದೊಳಗೆ ಹುಟ್ಟಿರ್ದ ಬಳಿಕ ಸ್ತುತಿ ನಿಂದೆಗಳು ಬಂದಡೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕವ್ವಾ!

ಎಂದು ಶಾಂತಿಯಿಂದ ತಿಳಿಹೇಳುವಳು. ಆದರೂ ತಾಯಿಗೆ ಸಮಾಧಾನವಾಗದೆ, ಮಗು ಮಹಾದೇವಿ! ಬೇಡ, ಆ ಕಾಡುವಾಸ. ಅದು ಕಠಿಣ ಪ್ರಕೃತಿಯುಳ್ಳ ಋಷಿ-ಮುನಿಗಳಿಗೂ ಕೂಡ ಕಷ್ಟಕರವಾದುದು ನಿನ್ನಂಥ ಕೋಮಲೆಯು ಅದನ್ನು ಹೇಗೆ ಸಹಿಸಿಕೊಳ್ಳುವಿ! ಹಸಿವು-ತೃಷೆಗಳನ್ನು ಹೇಗೆ ನೀಗುವಿ! ಕಾಡುಗಲ್ಲು, ಕೆಟ್ಟ ಮುಳ್ಳು, ಕ್ರೂರ ಮೃಗಗಳ ಕಾಟ, ಕಾಯ್ದ ಬಿಸಲು ಇವನ್ನೆಲ್ಲ ಹೇಗೆ ಸಹಿಸುವಿ! ಕಲ್ಲು-ಮುಳ್ಳುಗಳನ್ನು ತುಳಿದು ತೊಂದರೆಗೊಳ್ಳುವಾಗ ಯಾರು ಬಂದು ನಿನ್ನನ್ನು ಸಂತವಿಡುವರು? ಬಿಸಲಿನಿಂದ ಬೆಂದು ಬಳಲಿ ಬಾಯಾರಿ ಬೇಗುದಿಗೊಳ್ಳುವಾಗ ನೀರನಾರುತಂದುಕೊಟ್ಟು ನೆರವಾಗುವರು? ಕಾಡಿನ ಭೀಕರ ಪ್ರಾಣಿಗಳು ಬೆನ್ನಟ್ಟಿ ಬಂದು ಹಿಂಸಿಸುವಾಗ ನೀನು ನಂಬಿದ ಆ ಚೆನ್ನಮಲ್ಲಿಕಾರ್ಜುನನು ಬಂದು ನಿನ್ನನುಳುಹಿಕೊಳ್ಳುವನೆ? ಬಾರನು, ಆತನೆಂದಿಗೂ ಬಾರನು. ಹೋಗಬೇಡ. ತಮ್ಮ ಜೀವಕ್ಕಿಂತಲೂ ಜಗತ್ತಿನಲ್ಲಿ ಬೇರೆ ಪ್ರೇಮದ ವಸ್ತುವುಂಟೆ? ಅಂತಹ ಪ್ರೇಮದ ಜೀವವನ್ನು ವ್ಯರ್ಥವಾಗಿ ಕಾಡಿಗಟ್ಟಿ ಕಷ್ಟಗೊಳಿಸಬೇಡ. ಸುಖವಾಗಿ ಸಂತೋಷವಾಗಿ ಮನೆಯಲ್ಲಿಯೇ ಇರು. ಬೇಕಾದರೆ ಆತನನ್ನು ಮನೆಯಲ್ಲಿಯೇ ಪೂಜಿಸು. ಕಾನನಕ್ಕೆ ಮಾತ್ರ ಧುಮುಕಬೇಡ ಮಗಳೆ! ಎಂದು ಗೋಳಿಡುವ

ತಾಯಿಗೆ- ಎಲೆ ತಾಯಿ! ಕೇಳು, ನೀನು ಹೇಳುವದು ನಿಜ. ಆದರದು ದೇಹದ ಮೇಲೆ ಮೋಹವುಳ್ಳವರಿಗೆ ಮಾತ್ರ ಸಲ್ಲುವದು. ನಾನು —

> "ಕಿಡಿ ಕಿಡಿ ಕೆದರಿದಡೆ ಎನಗೆ ಹಸಿವು ತೃಷೆ ಅಡಗಿತೆಂಬೆನು. ಮುಗಿಲು ಹರಿದು ಬಿದ್ದರೆ, ಎನಗೆ ಮಜ್ಜನಕ್ಕೆರೆದರೆಂಬೆನು. ಗಿರಿ ಮೇಲೆ ಬಿದ್ದರೆ ಎನಗೆ ಪುಷ್ಪ ಚೆಲ್ಲಿದರೆಂಬೆನು. ಚೆನ್ನಮಲ್ಲಿಕಾರ್ಜುನಯ್ಯಾ! **ಶಿರ ಹರಿದು ಬಿದ್ದರೆ ಪ್ರಾಣ ನಿಮಗರ್ಪಿತವೆಂಬೆನು."**

ಈ ನಶ್ವರವಾದ ದೇಹಕ್ಕಾಗಿ ದುಃಖಿಸುವವಳಲ್ಲ. ಆತನ ಸಲುವಾಗಿ ಇದು ಇದ್ದರೂ ಅಷ್ಟೆ, ಹೋದರೂ ಅಷ್ಟೆ, ಇದರಲ್ಲಿರುವ ಆತ್ಮವು ಎಂದೆಂದಿಗೂ ಅವಿನಾಶಿ ಈ ದೇಹವು ಅಳಿಯುತಕ್ಕುದು. ಆತನಲ್ಲಿಟ್ಟ ಆ ಪ್ರೇಮು ಉಳಿಯುತಕ್ಕುದು ಈ ತನುವಿಗಾಗಿ ನಾನು ಕೊರಗುವವಳಲ್ಲ; ಮರಗುವವಳಲ್ಲ. ತಿರುಗಿ ಮನೆಗೆ ಬರುವವಳೂ ಅಲ್ಲ. ಏಕೆಂದರೆ —

> "ಎನ್ನ ಮನವ ಮಾರುಗೊಂಡನವ್ವಾ! ಎನ್ನ ತನುವ ಸೂರೆಗೊಂಡನವ್ವಾ! ಎನ್ನ ಸುಖವನೊಪ್ಪುಗೊಂಡನವ್ವಾ! ಎನ್ನಿರವಸಂಬುಗೊಂಡನವ್ವಾ! **ಚೆನ್ನಮಲ್ಲಿಕಾರ್ಜುನನ ಒಲುಮೆಯವಳಾನು."**

ನನ್ನ ಮನವು ಆತನ ಭಕ್ತಿ ತರಂಗಿಣಿಯಲ್ಲಿ ಮುಳುಗಿಹೋಗಿದೆ. ಅದರ ಪ್ರವಾಹದೊಡನೆ ತೇಲಿಹೋಗಿದೆ. ಆ ಪ್ರವಾಹವನ್ನು ಎದುರಿಸಿ ಈಚೆಗೆ ಬರಲು ನನ್ನಿಂದ ಸಾಧ್ಯವಿಲ್ಲ. ತಾಯಿ! ವೃಥಾ ತಡೆಗಟ್ಟಬೇಡ; ಬಿಟ್ಟು ಬಿಡು. ಇದೋ ಅಲ್ಲಿ ನಿಂತು ಕರೆವ ಆತನ ಪಿಸುಮಾತು ಕೇಳಿಬರುವಂತಿದೆ. ಈ ಸುಳಿಗಾಳಿಯೂ ಆತನ ಸಂದೇಶವನ್ನೇ ಹೇಳಲು ಸುಳಿದು ಸಮೀಪಕ್ಕೆ ಬರುವಂತಿದೆ. ಬಿಡು; ಬೇಗ ಬಿಡು. ಎಂದು ಅಪ್ಪಿಕೊಂಡ ತಾಯಿಯ ಕೈಯನ್ನು ಸಡಿಲಿಸುವಳು. ತಾಯಿಯ ಆ ಮೃದುಹೃದಯವು ವಿದೀರ್ಣವಾದಂತೆನಿಸಿತು. ನೆಲಕ್ಕುರುಳಿ ದುಃಖಾನುಕಂಪಗಳಿಂದ ಕಂಬನಿದುಂಬಿ ಮುಖವನ್ನು ಮೇಲಕ್ಕೆತ್ತಿ-ದೇವಿ! ಎನ್ನ ಮನೆಗೆ ಜ್ಯೋತಿ

ಯಂತಿದ್ದ ನೀನು ಹೋದಮೇಲೆ ........ ಎಂದು ಅಳಲಾರಂಭಿಸುವಳು. ತಾಯೀ ಶೋಕಿಸದಿರು, ಸಂತಾಪಗೊಳ್ಳದಿರು. ನನ್ನ ಜೀವನದಲ್ಲಿ ನಾನು ತಪ್ಪು ಹೆಜ್ಜೆಯಿಟ್ಟರೆ, ಅಡ್ಡ ದಾರಿ ಹಿಡಿದರೆ, ಅಲ್ಲದ ಕಾರ್ಯವ ಮಾಡಿದರೆ ಅಲ್ಲವೆ ಮರುಗುವುದು? ನೀನು ಈ ವಿಷಯದಲ್ಲಿ ದಯೆ-ಮಮತೆಗಳನ್ನೂ ಶೋಕ-ಸಂತಾಪಗಳನ್ನೂ ತೋರದಿರು. ಮಂಗಲ ಕಾರ್ಯದಲ್ಲಿ ಅಮಂಗಳ ಬೇಡ. ನಾನು ಹೋದಮೇಲೆ ನನ್ನ ನೆನಹಾಗಲಿ. ನಾನು ನಿನ್ನೊಡನಾಡಿದ ನೇಹದ ನುಡಿಗಳಾಗಲಿ ನಿನ್ನ ಕನಸಿನಲ್ಲಿಯೂ ಸುಳಿಯದಿರಲಿ. ತಾಯೀ ನಿನ್ನಗಲಿ ಹೋಗುವೆ, ಪ್ರೇಮದಿಂದ ಬೀಳ್ಕೊಡು. ಚೋಳರಾಜನ ಹೆಂಡತಿ ಅಮೃತವತಿಯು, ತಂದೆಯ ಅಪ್ಪಣೆಯಂತೆ ಮರಣಶಾಸನಕ್ಕೆ ಮಗನು ತೆರಳುವಾಗ ಖೇದಗೊಳ್ಳದೆ ಸಂತೋಷದಿಂದ **'ಪೆತ್ತಬ್ಬೆ ಪಾರ್ವತಿಯು ತೊಡೆಯೇರಿ ಮುದ್ದುಗುಡು ಪೋಗೆಂದು'** ಬೀಳ್ಕೊಡಲಿಲ್ಲವೆ? ನಾನೇನು ಅಂತಹ ದುಸ್ಸಹ ಕಾರ್ಯಕ್ಕೆ ಹೊರಟಿರುವೆನೆ? ಇನಿತಕ್ಕೆ ಇಷ್ಟೊಂದು ಆಲಾಪವೇಕೆ? ಅಳದಿರು ತಾಯಿ! ಎಂದು ಏನೇನೋ ಹೇಳಿ ತನ್ನ ಹಟವನ್ನೇ ಸಾಧಿಸುವಳು.

ಅವಳ ಯಾವ ಮಾತೂ ತಾಯಿಗೆ ಸಮಾಧಾನವನ್ನುಂಟುಮಾಡಲಿಲ್ಲ. ತಾಯಿಗಳ ಕರುಳು ಸಹಜವಾಗಿ ಅತಿ ಕೋಮಳವಾದುದು. ತಮ್ಮ ಮಕ್ಕಳು ಎಂತಹ ಕುರೂಪಿಯಿದ್ದರೂ ಅದನ್ನೇ ಅರಗಿಣಿಯೆಂದು ಹೇಳಿ ಹಾಡಿಕೊಂಡು ಮುದ್ದಾಡಿ ಆನಂದಪಡುವರು ಎಷ್ಟೋ ಜನ. ಆದರೆ ಅಕ್ಕನು ಲೋಕೋತ್ತರ ಸುಂದರಿ. ಮೇಲಾಗಿ ಸರ್ವಗುಣಸಂಪನ್ನೆ. ಇಂತಹ ಮಗಳನ್ನು ಕಳೆದುಕೊಳ್ಳುವದೆಂದರೆ ಸುಮತಿಗೆ ಹೇಗಾಗಿರಬೇಕು? ಅವಳು ಕಂಬನಿಗರಿಯುತ್ತ ಮಗಳನ್ನು ಅಡ್ಡಗಟ್ಟುವಳು. ಅಕ್ಕನು ಪರಿಹರಿಸುವಳು. ನೆರೆದವರು ನೋಡಿ ಸಹಿಸಲಾರದೆ ಮಾದೇವಿ! ಗೋಳಿಡುವ ನಿನ್ನ ತಾಯಿಯ ಈ ಕನಿಕರ ಸ್ಥಿತಿಯನ್ನು ನೋಡಿಯೂ ಹೋಗುವದು ನಿನಗುಚಿತವಲ್ಲವಮ್ಮ! ಬಿಟ್ಟುಬಿಡು; ಹೋಗಬೇಡ. ಹೋಗಿ ಮಾಡುವದಾದರೂ ಏನು? ಎಂದು

ಎಲ್ಲರೂ ಕೇಳುವರು. ಅಷ್ಟಕ್ಕೆ ಅಕ್ಕನು-ಸಖಿಕರೆ, ಹಿರಿಯರೆ! ಇವಳ ಗೋಳನ್ನು ನೋಡುತ್ತಿದ್ದೇನೆ; ಆದರೆ ಇವಳ ಗೋಳು ನನ್ನ ಮುಂದಿನ ಬಾಳಿನ ಕೇಡಿಗಾಗಿ ಅದೆಯೆಂಬುದು ನಿಮಗಾರಿಗೂ ತಿಳಿಯದು. ನಾನು ಹೋಗಿ ಏನು ಮಾಡುವೆನೆಂಬುದನ್ನೂ ನೀವು ಅರಿಯಿರಿ. ನಾನೀಗ ಹೋಗಲೇಬೇಕು. ನನ್ನ ಧ್ಯೇಯವನ್ನು ನಾನು ಸಾಧಿಸಲೇಬೇಕು. ಇನ್ನು ನಾನು ತಡೆಯಲಾರೆ. ಹಿರಿಯರೇ ಶಿರಬಾಗುವೆನು. ಸಖಿಯರೇ ನಿಮಗೂ ಶರಣು. ತಾಯಿಯೇ ಪೊಡಮಡುವೆ. ನಿಮ್ಮೆಲ್ಲರ ಆಶೀರ್ವಾದವಿರಲಿ! ಎಂದು ಹೇಳಿ ಬಲಾತ್ಕಾರದಿಂದ ಉಡುತಡಿಯ ಪುಣ್ಯವೇ ಒಂದು ಮೂರ್ತಿಮತ್ತಾಗಿ ಹೋಗುವಂತೆ ಹೋಗಿಬಿಡುವಳು. ಎಲ್ಲರೂ ಎವೆಯಿಕ್ಕದೆ ಅವಳನ್ನೇ ನೋಡುತ್ತ ಮನದಲ್ಲಿ ಮಿಡುಕುತ್ತ, ಕೆಲವರು ಕಣ್ಣೀರಿಡುತ್ತ ಚಕಿತರಾಗಿ ಚಿತ್ರದ ಬೊಂಬೆಗಳಂತೆ ಕ್ಷಣಕಾಲ ಹಾಗೆಯೇ ನಿಂತುಬಿಡುತ್ತಾರೆ. ಇತ್ತ ತಾಯಿಯು ಮಗಳ ಮೋಹದಿಂದ ಅಗಲುವಿಕೆಯನ್ನು ಸಹಿಸದೆ ಮೂರ್ಛಿತಳಾಗಿ ಪುನಃ ಎಚ್ಚತ್ತು ಮಗಳನ್ನು ನೆನೆಯುತ್ತ ತನ್ನ ದುರ್ವಿಧಿಯನ್ನು ದೂರಿಕೊಳ್ಳುತ್ತ ಎದೆ ಬಡಿದುಕೊಂಡು ಬೋರಿಟ್ಟು ಅಳಹತ್ತಿದ್ದಾಳೆ. ಕೆಲಜನರು ಏನೇನೋ ಹೇಳುತ್ತ ಹೇಗೇಗೋ ಸಂತೈಸತೊಡಗಿದ್ದಾರೆ. ಬೇರೆ ಕೆಲವರು "**ಹೆಣ್ಣು ಕಾಯ್ದವರಿಲ್ಲ; ಮಳೆಮಾರು-ಮರಣ ತಿಳಿದವರಿಲ್ಲ**" ಎಂದು ಪಿಸುಗುಟ್ಟಿ ಉಸುರೆಳೆದು ಹಿಂದಿರುಗಿದ್ದಾರೆ. ನಿರ್ಮಲನು ಏನನ್ನೂ ಅರಿಯನು ದುಃಖಾವೇಗದಿಂದ ದೂರದಲ್ಲಿ ಮೌನನಾಗಿ ಸ್ತಂಭಿತನಾಗಿ ಕುಳಿತಿದ್ದಾನೆ. ಅಂತು ಎಲ್ಲರ ಎದೆಯಲ್ಲಿ ಶೋಕ-ಮರುಕಗಳು, ನಯನದಲ್ಲಿ ನೀರು ತುಂಬಿಯೇ ಅವೆ. ಮಾಡುವದೇನು?



# ಕಾನನ ಜೀವನ.

---

ಮಹಾದೇವಿಯು ಮನೆಯನ್ನು ಬಿಟ್ಟು ಕಾನನವನ್ನು ಸೇರಿದ್ದರೂ ಅವಳ ಮನಸ್ಸು ಮಾತ್ರ ಕಾಡನ್ನು ಸೇರಿರಲಿಲ್ಲ. ಅದು ಚಲುವ ಚನ್ನಮಲ್ಲಿಕಾರ್ಜುನನಲ್ಲಿ ಸೇರಿದ್ದಿತು. ಅವಳಿಗೆ ಬೇರೆ ಯಾವುದರ ಚಿಂತೆಯಿರಲಿಲ್ಲ, ಪರಿವೆಯೂ ಇರಲಿಲ್ಲ. ಅವಳ ಹೃದಯದಲ್ಲಿ ಅವಳ ವಿಚಾರದಲ್ಲಿ ಅವಳ ಮುಖದಲ್ಲಿ ಅವಳ ಕಣ್ಣಿನಲ್ಲಿ ಸುಳಿದಾಡುವ ವಸ್ತುವೆಂದರೆ ಆ ಚನ್ನಮಲ್ಲಿಕಾರ್ಜುನನೊಬ್ಬನೆ. ಅವನಿಗಾಗಿ ತನ್ನ ಸುಖಗಳಿಗೆಲ್ಲ ತಿಲಾಂಜಲಿಯನ್ನಿತ್ತಿದ್ದಳು; ಬರುವ ದುಃಖಗಳಿಗೆಲ್ಲ ಬದ್ಧಾಂಜಲಿಯಾಗಿದ್ದಳು. ಆದುದರಿಂದ ಮಾರ್ಗದಲ್ಲಿ ಉಂಟಾದ ಕಲ್ಲು-ಮುಳ್ಳುಗಳ ಬಾಧೆಯು ಅವಳನ್ನು ಬಾಧಿಸದೆ ಹೋಯಿತು. ಹಸಿವು ತೃಷೆಗಳು ಅವಳ ಸುತ್ತುಮುತ್ತ ಸುಳಿಯದಾದವು ಬಿಸಿಲಿನ ಬೇಗೆಯು ಅವಳನ್ನು ತಟ್ಟಲಿಲ್ಲ. ಮಾರ್ಗಾಯಾಸವು ಅವಳನ್ನು ಮುಟ್ಟಲಿಲ್ಲ. ಸಿಬ್ಬೆರಗಿನಲಿ ಎಲ್ಲವನೂ ಮೀರಿ ತೂರಿ ಆತ್ಮಾನಂದದ ಆವೇಗ-ಆವೇಶಗಳಲ್ಲಿ ತಾನೆತಾನಾಗಿ ಪ್ರಚಂಡ ಸೂರ್ಯನೇ ಧರೆಗಿಳಿದು ಕಾನನವನ್ನು ಸುಳಿವಂತೆ ತನ್ನ ದಿವ್ಯಜ್ಯೋತಿಯೊಡಗೂಡಿ ಕಾನನವನ್ನೇ ಸುತ್ತಿದ್ದಾಳೆ. ಕೊನೆಗೆ ಭದ್ರೆಯ ತೀರಕ್ಕೆ ಬಂದಿದ್ದಾಳೆ. ನದಿಯು ಕಲ್ಲುಬಂಡೆಗಳ ಮೇಲೆ ಹಾಯ್ದು ಆರ್ಭಟಿಸಿ ಕೂಗುತ್ತ ಕೆಳಕ್ಕೆ ಬೀಳುತ್ತಿದೆ. ಮಹಾದೇವಿಯ ಮನಸ್ಸು ಮಲ್ಲಿಕಾರ್ಜುನನಲ್ಲಿಗೆ ಹರಿಯುತ್ತಿರುವಂತೆ ನದಿಯು ಸಾಗರವನ್ನು ಅದೆಂದು ಸೇರುವೆನೋ ಎಂದು ಧಾವಿಸಿ ತಡೆಯದೆ ಓಡುತ್ತಿದೆ. ಬಿಸಲಿಗೆ ಬಳಲಿ ಬಂದವರನ್ನು ನೀರ್ಗುಡಿಯಲು ಕರೆವಂತೆ 'ಭೋ' ಎಂದು ಕೂಗುತ್ತಿದೆ. ಆ ಕೂಗಿಗೆ ಕಿವಿಗೊಟ್ಟು ಮಹಾದೇವಿಯು ಅಲ್ಲಿಯೇ ನಸುನಿಲ್ಲುತ್ತಾಳೆ. ಎದುರಿಗೆ ತಿಳಿತಿಳಿಯಾಗಿ

ಹರಿಯುವ ಭದ್ರೆ. ಚನ್ನಾಗಿ ದಿಟ್ಟಿಸಿ ಮನಸ್ಸಿನಲ್ಲಿ ಹೀಗೆ ಯೋಚಿಸು ತ್ತಾಳೆ. ಇದು ಸಾಗರವ ಸೇರಬೇಕೆಂಬ ಭದ್ರೆ. ನಾನು ಮಲ್ಲಿಕಾರ್ಜುನನ ನನ್ನು ಕೂಡಬೇಕೆಂಬ ರುದ್ರೆ. 'ಸಮಾನ ಶೀಲ ವ್ಯಸನೇಷು ಸಖ್ಯಂ' ಎಂಬಂತೆ ಇಂದು ರುದ್ರೆ-ಭದ್ರೆಯರ ಸಮಾಗಮದಲ್ಲಿ ಒಂದು ಸಖ್ಯವಿದೆ, ಸ್ನೇಹವಿದೆ. ಎಂದು ಯೋಚಿಸುತ್ತ ಸುತ್ತಲೂ ಇಣಿಕಿಸುತ್ತಾಳೆ. ಲತೆಗಳಲ್ಲಿ ತರತರದ ಹೂವು ಗೊಂಚಗೊಂಚಲಾಗಿ ಜೋತುಬಿದ್ದಿವೆ. ಗಿಡ-ಮರಗಳಲ್ಲಿ ಬಗೆಬಗೆಯ ಹಣ್ಣು-ಕಾಯಿಗಳು ಸುರಿದು ತುಂಬಿ ಕೊಂಡಿವೆ. ಮೇಲೆ ಬೈಗುಗೆಂಪು ತನ್ನ ಹೊಂಬಣ್ಣವನ್ನು ಹರವಿದೆ. ಅದರಲ್ಲಿ ಕುಕಿಲಿಡುವ ಕೋಗಿಲೆ, ಗುಞ್ಗುಡುವ ಅಳಿಕುಳ, ನರ್ತಿಸುವ ನವಿಲು, ವರ್ತಿಸುವ ಹಂಸೆ, ಹಾರಾಡುವ ಹಕ್ಕಿ, ಓಡಾಡುವ ಮೃಗ ಇವು ಆ ವನಕ್ಕೆ ಇನ್ನೂ ಹೆಚ್ಚಿನ ಶೋಭೆಯನ್ನು ತಂದಿದ್ದವು. ಆಹಾ! ಎಂತಹ ಮಂಗಲವಾದ ಹೊನಲು, ಎಷ್ಟು ತಂಪಾದ ನೆಳಲು, ಏನು ಹಿತವಾದ ಎಳೆಬಿಸಿಲು, ಏನು ಮಿತವಾದ ತಂಗಾಳಿ, ಎನಿತು ಚಲುವಾದ ಪ್ರಕೃತಿಯಿದು ಎಂದು ಬಗೆಯುತ್ತ ತೀರದ ತರುಗಳ ತಣ್ಣೆಳಲಲ್ಲಿ ಕುಳಿತು ಕೊಳ್ಳುವಳು; ಮತ್ತೆ ಸುತ್ತಲೂ ನಿರುಕಿಸುವಳು. ಎಲ್ಲೆಲ್ಲಿಯೂ ಮನೋ ಹರತೆಯಿದೆ, ಮಲ್ಲಿಕಾರ್ಜುನನೇ ಇಲ್ಲ. ಕೆಲಹೊತ್ತು ಪ್ರಕೃತಿ ಸೌಂದ ರ್ಯವನ್ನು ಪರಿಕಿಸಿ ಪರವಶಳಾದ ಅಕ್ಕನಿಗೆ ಮಲ್ಲಿಕಾರ್ಜುನನ ನೆನವಾ ದೊಡನೆ ಆ ಬನಸಿರಿಯು ಅವಳ ಮನದುರಿಯಾಗಿ ಪರಿಣಮಿಸಿದೆ. ಕೋಗಿಲೆಯ ಕಲರವದಿಂಪು, ತೀಡುವ ತಂಗಾಳಿಯ ತಂಪು, ಪಸರಿಸಿದ ಹೂಗಳ ಕಂಪು ಅವಳ ಮನಸ್ಸನ್ನು ಇನ್ನೂ ಉದ್ರೇಕಗೊಳಿಸಿದವು. ಮಲ್ಲಿಕಾರ್ಜುನನಿಂದು ಏನಾದರೂಮಾಡಿ ಎಂತಾದರೂ ಮಾಡಿ ಕಾಣಲೇ ಬೇಕೆಂದು ನಿರ್ಧರಿಸುವಳು. ಆದರೆ ಆತನೊಲಿಸುವ ಸಾಧನವಾವುದು ಎಂಬ ಚಿಂತೆಯು ಅವಳನ್ನು ಆವರಿಸುವದು. ಅಷ್ಟರಲ್ಲಿಯೆ ತಪಸ್ಸಾ ಧನವು ಸ್ಮೃತಿಪಥಕ್ಕೆ ಬಂದುಹೋಗುವುದು. ಕೂಡಲೆ ಎದ್ದುಹೋಗಿ ಭದ್ರೆಯಲ್ಲಿ ಮಿಂದು —

"ಸಜ್ಜನಳಾಗಿ ಮಜ್ಜನಕ್ಕೆರೆವೆ. ಶಾಂತಳಾಗಿ ಪೂಜೆಯ ಮಾಡುವೆ.
ಸಮರತಿಯಿಂದ ನಿಮ್ಮ ಹಾಡುವೆ. ಚನ್ನಮಲ್ಲಿಕಾರ್ಜುನಯ್ಯ !
ನಿಮ್ಮ ನಗಲದ ಪೂಜೆ ಅನುವಾಯಿತ್ತೆನಗೆ."

ಎಂಬುದಾಗಿ ಪ್ರಕೃತಿಯ ನೋಟದಿಂದ ಪೂಜೆಗೆ ಮನವೆಳಸಿ ಅನುವಾಗಿದ್ದಾಳೆ. ತೊರೆಯ ನೀರೊಡನೆ ತನ್ನ ಮನೋಜಲವನ್ನು ಬೆರಸಿ ಲಿಂಗಕ್ಕೆ ಮಜ್ಜನವ ಮಾಡಿದ್ದಾಳೆ. ವನಕುಸುಮಗಳೊಡನೆ ತನ್ನ ಸುಗುಣಕುಸುಮಗಳನ್ನೂ ಧರಿಸಿದ್ದಾಳೆ. ಹಕ್ಕಿಗಳ ಹಾಡಿನೊಡನೆ ತನ್ನ ಅಕ್ಕರೆಯ ಅಮರವಾಣಿ (ವಚನ) ಯನ್ನು ಬೆರಸಿ ಮಧುರವಾಗಿ, ಮಂಜುಳವಾಗಿ—

"ಆಲಿಸೆನ್ನ ಬಿನ್ನಪವ, ಲಾಲಿಸೆನ್ನ ಬಿನ್ನಪವ, ಪಾಲಿಸೆನ್ನ ಬಿನ್ನಪವ,
ಏಕೆನ್ನ ಮೊರೆಯ ನೋಡೆನ್ನ ದುಃಖವ ಚನ್ನಮಲ್ಲಿಕಾರ್ಜುನಾ !"

ಎಂದು ಮನದ ಲವಲವಿಕೆಯಿಂದ ಆತ್ಮಕಳಕಳಿಯಿಂದ ಹಾಡಿದ್ದಾಳೆ; ಹರಿಸಿದ್ದಾಳೆ. ವನತರುವಿನ ಹಣ್ಣಿನೊಡನೆ ತನ್ನ ತನುವನದ ಆತ್ಮಫಲವನ್ನೂ ಅನನ್ಯಮನಸ್ಕಳಾಗಿ ಅನುರಾಗಪೂರಿತಳಾಗಿ ಅರ್ಪಿಸಿದ್ದಾಳೆ. ಕೊನೆಗೆ ಭಾವಪರವಶಳಾಗಿದ್ದಾಳೆ. ಹೀಗೆ ಇಡೀ ಇರುಳೆಲ್ಲ ತಪಿಸಿದ್ದಾಳೆ: ತಪಿಸಿ ತಪಿಸಿ ತಳಮಳಿಸಿದ್ದಾಳೆ. ಆದರೂ ಆತನನ್ನು ಕಾಣುವ ಕೌತುಹಲವು ಮಾತ್ರ ಅವಳ ಮುಖದ ಮೇಲೆ ಚಿಮ್ಮುತ್ತಿದೆ; ಶಾಂತಮಧುರ ಭಾವವು ಎಡೆಯಾಡುತ್ತದೆ. ಹೀಗಿದ್ದರೂ ಮಲ್ಲಿಕಾರ್ಜುನನು ಅವಳಿಗೆ ಮೈದೋರಿರಲಿಲ್ಲ; ಮನದೆರೆದಿರಲಿಲ್ಲ. ಆದರೂ ಅಕ್ಕನು ಉತ್ಸಾಹಭಂಗಿತಳಾಗದೆ ಉತ್ಕಂಠವುಕ್ಕಿ—

"ಅಯ್ಯಾ ನೀ ಕೇಳಿದರೆ ಕೇಳು, ಕೇಳದಿರ್ದೊಡೆ ಮಾಣು.
ನಾನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯ ! ಅಯ್ಯಾ ನೀ ಒಲಿದರೆ
ಒಲಿ, ಒಲಿಯದಿರ್ದೊಡೆ ಮಾಣು. ನಾನಿನ್ನ ಪೂಜಿಸಿದಲ್ಲದೆ
ಸೈರಿಸಲಾರೆನಯ್ಯ ! ಅಯ್ಯಾ : ನೀ ಮಚ್ಚಿದರೆ ಮಚ್ಚು, ಮಚ್ಚ
ದಿರ್ದೊಡೆ ಮಾಣು. ನಾನಿನ್ನನಪ್ಪಿದಲ್ಲದೆ ಸೈರಿಸಲಾರೆನಯ್ಯ !
ಅಯ್ಯಾ ನೀ ನೋಡಿದಡೆ ನೋಡು, ನೋಡದಿರ್ದೊಡೆ ಮಾಣು,

ನಾನಿನ್ನ ನೋಡಿ ಹಿಗ್ಗಿ ಹಾರೈಸಿವಲ್ಲವೆ ಸೈರಿಸಲಾರೆನಯ್ಯ! ಚನ್ನ ಮಲ್ಲಿಕಾರ್ಜುನಯ್ಯ **ನಾನಿಮ್ಮ ಪೂಜಿಸಿ ಹರುಷದೊಳೋಲಾಡುವೆನಯ್ಯ!"**

ಹೀಗೆಂದು ತನ್ನ ನಿಷ್ಕಾಮ ನಿಸ್ಸೀಮ ಪ್ರೇಮದಿಂದ ಮತ್ತೆ ಪೂಜೆಗೈಯು ವಳು. ಅದಕ್ಕೂ ಆತನೊಲಿಯುವದಿಲ್ಲ. ಆಗ ಅವಳು ತನ್ನ ಸತ್ಯದ ಸತ್ವಪರೀಕ್ಷೆಯು ಕ್ಷಿಪ್ರದಲ್ಲಿಯೇ ಆಗಬಹುದೆಂದು ಬಗೆದಳು. ಆದರೆ ಒಂದೆಡೆಗೆ ಕುಳಿತು ಆತನನ್ನು ಹುಡುಕುವುದು ಅವಳಿಗೆ ಬೇಸರಾಯಿತು. ಅವಳ ಆತ್ಮದ ಕೂಗು ಅರಣ್ಯರೋದನವಾಯಿತು. ಆದರೂ ಆ ತಪ್ಪನ್ನು ಆತನ ಮೇಲೆ ಹೊರಿಸಲಿಲ್ಲ. ಆತನೊಲಿಯದಿದ್ದುದು ತನ್ನದೇ ದೋಷ ವೆಂದು ಹೀಗೆ ಮರುಗುತ್ತಿದ್ದಳು.

"ಆವಾಗಳೂ ಎನ್ನ ಮನ ಉದರಕ್ಕೆ ಹರಿವುದು. ಕಾಣಲಾರೆ ನಯ್ಯ, ನಿಮ್ಮವನು. ಭೇದಿಸಲರಿಯೆನಯ್ಯ! ಮಾಯದ ಸಂಸಾರದಲ್ಲಿ ಸಿಲುಕಿದೆನು. ಎನ್ನ ದೇವ ಚನ್ನಮಲ್ಲಿಕಾರ್ಜು ನಯ್ಯ ನಿಮ್ಮ ಹೊದ್ದುವಂತೆ ಮಾಡಾ ನಿಮ್ಮ ಧರ್ಮ."

"ಪುಣ್ಯಪಾಪಂಗಳನರಿಯದ ಮೊದಲು ಅನೇಕ ಭವಂಗಳಲ್ಲಿ ಬಂದೆನಯ್ಯ. ನಂಬಿ ಶರಣು ಹೊಕ್ಕೆನಯ್ಯಾ! ನಿಮ್ಮನೆಂದೂ ಅಗಲದಂತೆ ಮಾಡಿ ನಡಿಸಯ್ಯ. ನಿಮ್ಮ ಧರ್ಮ, ನಿಮ್ಮ ಧರ್ಮ ನಿಮ್ಮನೊಂದನೇ ಬೇಡುವೆನು. ಎನ್ನ ಬಂಧನವ ಬಿಡುವಂತೆ ಮಾಡಯ್ಯ ಶ್ರೀ ಚನ್ನಮಲ್ಲಿಕಾರ್ಜುನಾ"

ಎಂದು ಪುನಃಪುನಃ ಆತನಲ್ಲಿ ಮೊರೆಯಿಡುತ್ತಿದ್ದಳು. ಹೀಗೆ ಅನಂತ ಕಾಲ ತಪಿಸಿದಳು; ಜಪಿಸಿದಳು. ಅವಳು ನೆನೆದರೂ ಆತನನ್ನೆ; ನುಡಿ ದರೂ ಆತನ ವಿಷಯವನ್ನೇ. ಮಲ್ಲಿಕಾರ್ಜುನನ ಕಾಣುವ ಬಯಕೆಯು ಇನ್ನೂ ಬಲವಾಯ್ತು. ಅವಳಿಗೆ ಏನು ಮಾಡಿದರೂ ಸಮಾಧಾನವಿಲ್ಲ. ಅವಳ ಆ ಆತುರತೆಯು ಹಕ್ಕಿಗಳನ್ನೂ ಸಹ ಕೇಳಹಚ್ಚಿತು. ಕುಳಿತ ವಳು ಥಟ್ಟನೇ ಎದ್ದಳು.—

"ಚಿಲಿಮಿಲಿಯೆಂದೋದುವ ಗಿಳಿಗಳಿರಾ ನೀವು ಕಾಣಿರೇ, ನೀವು ಕಾಣಿರೇ. ಸರವೆತ್ತಿಹಾಡುವ ಕೋಗಿಲೆಗಳಿರಾ ನೀವು ಕಾಣಿರೇ, ನೀವು ಕಾಣಿರೇ. ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೇ, ನೀವು ಕಾಣಿರೇ. ಕೊಳನ ತೊಡೆಯೊಳಾಡುವ ಹಂಸಗಳಿರಾ ನೀವು ಕಾಣಿರೇ, ನೀವು ಕಾಣಿರೇ. ಗಿರಿಗಹ್ವರದೊಳಗಾಡುವ ನವಿಲುಗಳಿರಾ ನೀವು ಕಾಣಿರೇ, ನೀವು ಕಾಣಿರೇ. ಚನ್ನಮಲ್ಲಿಕಾರ್ಜುನನೆಲ್ಲಿರ್ದಿಹನೆಂದು ನೀವು ಹೇಳಿರೇ, ನೀವುಹೇಳಿರೇ"

ಎಲ್ಲ ಹಕ್ಕಿಗಳನ್ನೂ ಕೇಳಿದಳು. ಆವರೆ ಅವೆಲ್ಲವೂ- ನಾವು ಪ್ರಕೃತಿಯ ಚೆಲುವನ್ನು ಬಗೆಬಗೆಯಾಗಿ ಬಣ್ಣಿಸಬಲ್ಲೆವು. ಆತನ ವಿಷಯದಲ್ಲಿ ಮಾತ್ರ ಮೌನವೇ ಉತ್ತರ ಎಂದು ಹೇಳಿವವು. ಹೀಗೆ ಎಲ್ಲೆಲ್ಲಿಯೂ ನಿರಾಶಯದ ಉತ್ತರವನ್ನೇ ಕಂಡು ಕಡುನೊಂದು ದಿಙ್ಮೂಢಳಾಗಿದ್ದಾಳೆ. ಬಿಸಲಿಗೆ ಬಾಡಿದ ಹೂವಿನಂತೆ ಮೊಗ ಕಂದಿಹೋಗಿದೆ. ಮಂಜು ಮುತ್ತಿದ ತಾವರೆಯಂತೆ ಹೃದಯ ನೊಂದುಹೋಗಿದೆ. ತನ್ನ ತೋಳುಗಳೆರಡನ್ನೂ ಮೇಲಕ್ಕೆ ನೀಡಿ ಓ ಶಂಕರಾ, ಶಶಿಧರಾ! ಓ ಗಿರೀಶಾ, ಗೌರೀಶಾ! ನಿನಗಾಗಿ ತೆರೆದ ಈ ಹೃದಯಕ್ಕೆ ಒಲವನೀಯದಾದೆಯಾ? ಈ ನಿರ್ಮಲ ಮನಸ್ಸಿಗೆ ನಿನ್ನ ಮೊಗದೋರದಾದೆಯಾ? ನಿನಗಾಗಿ ಮನೆಮಾರು, ಭೋಗಭಾಗ್ಯಗಳನ್ನು ತೊರೆದು ಬಂದೆ. ಆದರೂ ನಿನ್ನ ಮನವು ಕರಗಲಿಲ್ಲವೆ? ನಿನ್ನ ಭಾವವು ಬಳುಕಲಿಲ್ಲವೆ? ನಂಬಿ ಬಂದ ಈ ಹೃದಯಕ್ಕೆ ನಿನ್ನಲ್ಲಿ ಇಂಬು ಇಲ್ಲವೆ? ಮಲ್ಲಿಕಾರ್ಜುನಾ! ನಿಮ್ಮ ನೆಚ್ಚಿ ಬಂದೆ, ಮೆಚ್ಚು ಬೇಗ. ಒಮ್ಮೆ ಕಾಣದೆ ಅಭಯವಿತ್ತ ನೀನು ಇಂದು ಮಾತೂ ಆಡದಾದೆಯಾ? ಒಮ್ಮೆ ಕನಸಿಗೆ ಬಂದು ಹೋದ ನೀನು ಇಂದು ಕನಸಿಗೂ ನಿಲುಕದಾದೆಯಾ? ನಿಮ್ಮನು ನಾನೇ ಒಲಿಸುವೆನೆಂದು ಹೆಮ್ಮೆಪಟ್ಟುಕೊಂಡು ಬಂದುದಕ್ಕೇನಾದರೂ ಒಲಿಯದಾದೆಯಾ? ದೇವಾ! ಮಾರ್ನುಡಿಯದೆ ಮೌನವೆ? ನಿಮ್ಮಲ್ಲಿ ಸಲೆ ಸಂದತೊತ್ತಾನು. ನಿಮ್ಮನೊಡೆವೆರೆವುದೇ ಎನ್ನಾಶೆ. ಎಂದು ಹಲವು ವಿಧವಾಗಿ ಮೊರೆಯಿಟ್ಟು ಅಂಗಲಾಚುವಳು. ಆದರೂ ಆತನು ತೋರದೆ—

"ಅರಸಿ ತೊಳಲಿಪರಿಲ್ಲ. ಬಯಸಿ ಹೊಕ್ಕರಿಲ್ಲ. ತಪಸ್ಸು ಮಾಡಿದರಿಲ್ಲ. ಅದು ತನ್ನ ಬಹಕಾಲಕ್ಕಲ್ಲದೆ ಸಾಧ್ಯವಾಗದು. ಶಿವನೊಲಿದಲ್ಲದೆ ಕೈಗೂಡದು. ಚನ್ನಮಲ್ಲಿಕಾರ್ಜುನನಿಗೊಲಿದೆನಾಗಿ ನಾನು ಸಂಗನ ಬಸವಣ್ಣನ ಶ್ರೀಪಾದವ ಕಂಡು ಬದುಕುವೆನು."

ಎಂದು ಕೊನೆಗೆ ಮನದಲ್ಲಿ ನಿಶ್ಚಯಿಸಿ ಕಲ್ಯಾಣಕ್ಕೆ ತೆರಳುವಳು.



# ಕಲ್ಯಾಣದ ಪಯಣ.



ಅಕ್ಕನು ಇಂದು ಕಲ್ಯಾಣಮಾರ್ಗದಲ್ಲಿ ಕಾಲಿಟ್ಟಿದ್ದಾಳೆ. ಭಾವನಾ ಪ್ರಪಂಚದಲ್ಲಿ ಮಲ್ಲಿಕಾರ್ಜುನನು ಒಲಿಯದ ಕಾರಣವನ್ನು ಗೊತ್ತು ಹಚ್ಚಿ, ಹಾಡುಗಟ್ಟಿ ಹಾಡಹತ್ತಿದ್ದಾಳೆ.

"ಸಂಗದಿಂದಲ್ಲದೆ ಅಗ್ನಿ ಹುಟ್ಟದು. ಸಂಗದಿಂದಲ್ಲದೆ ಬೀಜ ಮೊಳೆದೋರದು. ಸಂಗದಿಂದಲ್ಲದೆ ದೇಹವಾಗದು. ಸಂಗದಿಂದಲ್ಲದೆ ಸರ್ವಸುಖದೋರದು........."

ಚನ್ನಮಲ್ಲಿಕಾರ್ಜುನನು ಶರಣರ ಸಂಗದಿಂದ ಸಾಧ್ಯನಲ್ಲದೆ ತಪಗಿಪಗಳಿಗೆ ಸಾಧ್ಯನಲ್ಲ. ಎಂದು ಬಗೆದು ಬಗೆದುಂಬಿ, ಆಗ ಎಲ್ಲೆಲ್ಲಿಯೂ ಹೆಸರಾದ ಅಲ್ಲಮಪ್ರಭು-ಬಸವಣ್ಣ-ಚನ್ನಬಸವಣ್ಣನವರ ಪುಣ್ಯದರ್ಶನಕ್ಕೆ ಮನ ವೆಳಸಿ ಅಲ್ಲಿಂದ ಹಾಗೆಯೇ ಹೊರಡುವಳು. ಬರುತ್ತ ದಾರಿಯುದ್ದಕ್ಕೂ ವೈರಾಗ್ಯ ಮೂರ್ತಿಯಾದ ಅಲ್ಲಮಪ್ರಭುವಿನ ಆ ಶುಭದರ್ಶನವಿನ್ನೆಂದಿಗೆ ದೊರಕೀತು? ಭಕ್ತಿಭಾಂಡಾರಿಯಾದ ಬಸವಣ್ಣನ ಮಂಗಲಮಯ

ಮೂರ್ತಿಯನ್ನು ಕಣ್ಣಾರೆ ಕಂಡು ಧನ್ಯಳಾಗುವ ಕಾಲವು ಎಂದಿಗೆ ಲಭ್ಯವಾದೀತು? ಷಟ್‌ಸ್ಥಲ ಚಕ್ರವರ್ತಿಯಾದ ಚನ್ನಬಸವಣ್ಣನ ಚನ್ನಿಗ ರೂಪವನ್ನು ಕಣ್ತುಂಬ ನಿರುಕಿಸಿ ಸಂತಸದ ಸುಗ್ಗಿಯಿಂದ ಹಿಗ್ಗುವ ಸಮಯವು ಇನ್ನೆಂದಿಗೆ ಪ್ರಾಪ್ತವಾದೀತು? ಎಂದು ಬಹುವಿಧವಾಗಿ ಭಾವಿಸಿ ಧಾವಿಸುತ್ತ ಬರುವಷ್ಟರಲ್ಲಿ ಕಲ್ಯಾಣವು ಕಣ್ಣಿಗೆ ಬೀಳುವುದು. ಆ ಮಂಗಲಮಯವಾದ ಕಲ್ಯಾಣವನ್ನು ಕಣ್ತುಂಬ ನೋಡಿ ಮನವುಕ್ಕಿ, ಹೃದಯವರಳಿ —

> "ಕಲ್ಯಾಣವೆಂಬುದಿನ್ನಾರಿಗೂ ಹೊಗಬಾರದು. ಅಸಾಧ್ಯವಯ್ಯ! ಆಶೆ ಆಮಿಷವಳಿದವಂಗಲ್ಲದೆ ಕಲ್ಯಾಣದತ್ತಲಡಿ ಇಡಬಾರದು. ನಾನೆಂಬುದ ಹರಿದವಂಗಲ್ಲದೆ ಕಲ್ಯಾಣವ ಹೊಗಬಾರದು. ಒಳಗೆ ತಿಳಿದು ಚನ್ನಮಲ್ಲಿಕಾರ್ಜುನನಂಗೊಲಿಸಿ ಉಭಯಲಜ್ಜೆಯಳಿದೆನಾಗಿ ಕಲ್ಯಾಣವ ಕಂಡು ನಮೋ ನಮೋ ಎನುತಿರ್ದೆನು."

ಎಂದು ಬಣ್ಣಿಸುತ್ತ ಪುರವನ್ನು ಪ್ರವೇಶಿಸುವಳು. ಅಷ್ಟರಲ್ಲಿ ಕಿನ್ನರಯ್ಯನು ಬಂದು ಇದಿರುಗೊಂಡು ಕರೆದುಕೊಂಡು ಅಲ್ಲಮಾದಿಗಳಿಂದ ಒಪ್ಪುವ ಅನುಭವ ಮಂಟಪಕ್ಕೆ ಆಗಮಿಸುವನು. ಅಕ್ಕನು ಶರಣರಿಗೆಲ್ಲ ಶರಣು ಮಾಡಿ ಒಂದೆಡೆಗೆ ನಿಲ್ಲುವಳು. ಷೋಡಶಪ್ರಾಯದ ತಾರುಣ್ಯ-ಯುಮಿಗಳ ಮನಸ್ಸನ್ನು ಎಳೆವ ಲಾವಣ್ಯಗಳಿಂದೊಡಗೂಡಿ ನಗ್ನಳಾಗಿ ಲಜ್ಜೆಯಳಿದು ನಿಂತಿರುವ ಮಾದೇವಿಯನ್ನು ಎಲ್ಲ ಶರಣರೂ ನೋಡಿ ಚಕಿತಗೊಳ್ಳುವರು. ಎಲ್ಲರೂ ಆಶ್ಚರ್ಯಾಂಬುಧಿಯಲ್ಲಿ ಮುಳುಗಿರುವಾಗ ಅಧ್ಯಕ್ಷರಾದ ಅಲ್ಲಮಪ್ರಭುವು– **'ಉದಮುದ ಯೌವನದಿಂ ಕೂಡಿದ ಸತಿ ನೀನಿತ್ತೇತಕೆ ಬಂದೆವ್ವಾ!'** ಎಂದು ಅಕ್ಕನನ್ನು ಕೇಳುವನು. ಅದಕ್ಕೆ ಅಕ್ಕಗಳು—

> "ಆಡುವುದು, ಹಾಡುವುದು, ಕೇಳುವುದು, ಹೇಳುವುದು. ನಡೆವುದು, ನುಡಿವುದು. ಸರಸ ಸಮ್ಮೇಳನವಾಗಿಪ್ಪುದಯ್ಯಾ ಶರಣರೊಡನೆ. ಚನ್ನಮಲ್ಲಿಕಾರ್ಜುನಯ್ಯ, ನೀ ಕೊಟ್ಟ ಆಯುಷ್ಯವುಳ್ಳನ್ನಕ್ಕರ, ಲಿಂಗ ಸುಖಿಗಳ ಸಂಗದಲ್ಲಿ ದಿನಂಗಳ ಕಳೆವೆನು."

ಎಂದು ಉತ್ತರಿಸುತ್ತಲೆ ಮುಂದೆ ಮಾತೆತ್ತಿ ಪ್ರಭುವೇ! ನಿಮ್ಮ ನೋಟದಿಂದ ಎನ್ನ ದಿಟ್ಟಿಗಳು ಕೃತಾರ್ಥವಾದವು. ನಿಮ್ಮ ಒಡನಾಟದಿಂದ ಎನ್ನ ವಾಣಿಯು ಧನ್ಯವಾಯಿತು. ನಿಮ್ಮ ಅನುಭವ ಗೋಷ್ಠಿಯಿಂದ ಎನ್ನ ಶ್ರೋತ್ರಗಳು ಸಫಲವಾದವು. ಹೆಚ್ಚೇನು? ನಿಮ್ಮೆಲ್ಲರ ಸಂಗದಿಂದ ಎನ್ನ ಸರ್ವಾಂಗವೂ ಚೊಕ್ಕ ಚಿನ್ನದಂತೆ ಪರಿಶುದ್ಧವಾಯಿತು. ಆದರೆ........" ಎಂದು ಸುಮ್ಮನಾಗುವಳು. ದೇವಿ! ಆ ಅರ್ಧೋಕ್ತಿಯ ರಹಸ್ಯವೇನು? ಹೆದರದೆ ಹೇಳು. ಭಯಪಡಬೇಡ. ಏನಿದ್ದರೂ ನಾವು ನೆರವಾಗಲು ಸಿದ್ಧರಿದ್ದೇವೆ. ಎಂದು ಅಲ್ಲಮನು ಒಳ್ಳೇ ಉತ್ಕಂಠದಿಂದ ಕೇಳುವನು. ಬಸವ-ಚನ್ನಬಸವರೂ ಕೇಳುವರು. ಸಿದ್ಧರಾಮ-ಮಡಿವಾಳ ಮಾಚಿ ತಂದೆಗಳೂ ಕೇಳಿದರು. ಆ ಅರೆಮಾತನ್ನು ಸಂಪೂರ್ಣವಾಗಿ ಕೇಳಲು ಎಲ್ಲರಿಗೂ ತವಕ ಹೆಚ್ಚಿತು. ಅಕ್ಕನಿಗೆ ಹೇಳಲು ಕೊಂಚ ಮನದಲ್ಲಿ ಅಳುಕು. ಶರಣರ ಆ ಆಗ್ರಹಕ್ಕೆ ಅನಿವಾರ್ಯವಾಗಿ ಅವಳು ಹೇಳಲೇ ಬೇಕಾಯಿತು. 'ಆದರೆ ಮನದಭಿಲಾಷೆ ಮಾತ್ರ ಪೂರೈಸಲಿಲ್ಲ' ಎಂದು ಮತ್ತೂ ಸಂದೇಹಾತ್ಮಕವಾಗಿಯೇ ಉತ್ತರಿಸುವಳು. ಆಗ ಎಲ್ಲರಿಗೆ ತವಕವು ಇನ್ನೂ ಹೆಚ್ಚಿತು. ಒಮ್ಮೆಲೆ ಎಲ್ಲರೂ 'ಮನದಭಿಲಾಷೆ ಯಾವುದು?' ಎಂದು ಏಕಕಂಠದಿಂದ ಕೇಳಿದರು. ಅಕ್ಕನು ಮೆಲುದನಿಯಲ್ಲಿ–ಶರಣರೆ, ಶರಣುಜನ ಕರುಣಾಳುಗಳೆ! ನಾನು ನಿಮ್ಮ ಕರುಣೆಯ ಶಿಶು. ಈಗ ಪ್ರಾಪ್ತವಯಸ್ಕಳು. ವಯಕ್ಕನುಗುಣವಾಗಿ ಆ ಚೆಲುವ ಚನ್ನಮಲ್ಲಿಕಾರ್ಜುನನ ಕೈ (ನಾಲಿಗೆ ಕಚ್ಚುವಳು) ಹಿಡಿಯಬೇಕೆಂಬ ಹಂಬಲುಳ್ಳವಳು. ಅದಕ್ಕಾಗಿ ಅನಂತಕಾಲ ತಪಿಸಿಯಾಯಿತು; ಜಪಿಸಿಯಾಯಿತು. ಮೊರೆಯಿಟ್ಟು ಕಣ್ಣೀರಿಟ್ಟುದಾಯ್ತು. ಧರೆಯ ಸುತ್ತಿ ಸುಳಿದುದಾಯ್ತು. ಏನಾದರೂ ಆತನ ಕರುಳು ಕರಗಲಿಲ್ಲ. ಒಮೆ ಮಾತ್ರ ಕನಸಿಗೆ ಬಂದು ಕಾಣಿಸಿಗೊಂಡನು. ಎನ್ನ ಮನದಾಸೆಯನ್ನು ಇನ್ನೂ ಇಮ್ಮಡಿಯಾಗಿ ಹೆಚ್ಚಿಸಿ ಹೋದನು. ಮರಳಿ ಮರೆತಾದರೂ ಮೊಗದೋರಲಿಲ್ಲ. **ಭಕ್ತಿಲಂಪಟನಾದ ಆತನು ನಿಮ್ಮ ಸಂಗದಲ್ಲಿ ಸೇರಿ ಹಾಯಾಗಿರುವಂತೆ ತೋರುತ್ತದೆ.** ಆದ್ದರಿಂದ ನಿಮ್ಮ

ಹೊರ್ತು ಆತನೊಲಿಯುವಂತೆ ಮಾಡಲು ಬೇರೆ ಯಾರಿಗೂ ಸಾಧ್ಯವಿಲ್ಲ. **ಪ್ರಭುವೇ ! 'ಆತನ ಬರುವೇ ಎನ್ನ ಅಸುವಿನ ಬರುವು'** ನಿಮ್ಮ ಕಂದನಮೇಲೆ ನಿಮ್ಮ ಕರುಣೆಯಿದ್ದರೆ ಆತನು ನನ್ನ ಕೈಹಿಡಿವಂತೆ ಕರುಣಿಸಬೇಕು. (ಎಂದು ಕಣ್ಣೀರು ಮಿಡಿವಳು.) ಸೈರಿಸಿಗೊಂಡು, ಇದೋ ವಂದಿಸುವೆ. (ಎಂದು ಎಲ್ಲರಿಗೂ ಶರಣು ಮಾಡಿ) ಪ್ರಭುವೇ, ನಿಮ್ಮ ಸ್ನೇಹದ ಸೊಸೆ. ಬಸವಣ್ಣ, ನಿಮ್ಮ ಪ್ರೇಮದ ಪುತ್ರಿ. ಶರಣರೇ, ನಿಮ್ಮ ನೇಹದ ತೊತ್ತು. ನಿಮ್ಮನೆಲ್ಲರನ್ನೂ ಇಂದು ಶರಣುಹೊಕ್ಕಿರುವೆ. ಎನ್ನನಿಂದು ನೀವೆಲ್ಲ ಕಾಪಾಡಬೇಕು. (ಎಂದು ಮತ್ತೆ ಕಣ್ಣೀರಿಡುವಳು.)

ಅವಳ ಆ ಅಂತಃಕರಣದ ನುಡಿಗೆ ಎಲ್ಲರ ಹೃದಯಗಳೂ ಕರಗಿ ಮರುಕುಗೊಳ್ಳುವವು. ಅಲ್ಲಮನು ಮೆಚ್ಚಿ ಮಲ್ಲಿಕಾರ್ಜುನನನ್ನು ಕೊಡಲು ಒಡಂಬಡುವನು. ಶುಭಮುಹೂರ್ತವು ನಿರ್ಧರವಾಯಿತು. ಮಂಟಪರಚನೆಯು ಪ್ರಾರಂಭವಾಯಿತು. ಪಚ್ಚೆಯ ನೆಲೆಗಟ್ಟು, ಕನಕದ ತೋರಣ, ವಜ್ರದಕಂಭ, ಪವಳದ ಚಪ್ಪರವಿಕ್ಕಿದರು. ಮುತ್ತು ಮಾಣಿಕ್ಯದ ಮೇಲಕಟ್ಟೆಯ ಕಟ್ಟಿದರು. ಆಲಿಕಲ್ಲ ಹಸೆಯ ಹಾಸಿದರು. ಗುರು ತೆತ್ತಿಗನಾದ ಮಲ್ಲಿಕಾರ್ಜುನನು ಮದುವಣಿಗನಾದ. ಮಹಾದೇವಿಯಕ್ಕನು ಮದುವಳಿಗೆಯಾದಳು. ವಸುಧೆಯ ಭಕ್ತರೆಲ್ಲರೂ ನಿಬ್ಬಣಿಗರಾದರು.

ಅಂದು ಅಕ್ಕಮಹಾದೇವಿಯ ಆನಂದಕ್ಕೆ ಪಾರವೇ ಇಲ್ಲ. ದೇವನೊಲಿದುದಕ್ಕೆ ಹಿಗ್ಗಿ ಹೆಚ್ಚಿ ಹೊರೆಯೇರಿದ್ದಾಳೆ. ಉತ್ಸಾಹವುಕ್ಕಿ ಉಣ್ಮಿದೆ. ಈ ಮಂಗಲಕರವಾದ ಸುದ್ದಿಯು ಕಲ್ಯಾಣದಲ್ಲಿ ಎಲ್ಲೆಲ್ಲಿಯೂ ಹಬ್ಬಿದೆ. ಎಲ್ಲಿನೋಡಿದರೂ ಸಂಭ್ರಮವೇ ಸಂಭ್ರಮ. **ಅಂದು ನೋಡುವವರಿಗೆ ಕಲ್ಯಾಣವೆಂಬುದು ಊರಲ್ಲ; ಅಕ್ಕನ ವಿವಾಹಕ್ಕಾಗಿ ರಚಿಸಿದ ಕಲ್ಯಾಣಮಂಟಪ.** ಎಷ್ಟೋ ಶರಣೆಯರು ಅಕ್ಕರೆಯಿಂದ ಅಕ್ಕನಿಗೆ ಒಳ್ಳೊಳ್ಳೆ ವಸ್ತ್ರಾಭರಣಗಳನ್ನು ತಂದುಕೊಡಹೋಗಿದ್ದಾರೆ. ಅವನ್ನು ಅಕ್ಕನು ಮುಟ್ಟದೆ—

> "ಮಂಗಳವೇ ಮಜ್ಜನವೆನಗೆ, ವಿಭೂತಿಯೇ ಒಳಗುಂದದರಿಸಿನವೆನಗೆ. ದಿಗಂಬರವೇ ದಿವ್ಯಾಂಬರವೆನಗೆ. ಶಿವಪಾದರೇಣುವೇ ಅನುಲೇಪನವೆನಗೆ. ರುದ್ರಾಕ್ಷಿಯೇ ಮೈದೊಡಿಗೆಯೆನಗೆ. ಶರಣರ ಪಾದಂಗಳೇ ತೊಂಡಿಲ ಬಾಸಿಗವೆನಗೆ. ಚನ್ನಮಲ್ಲಿಕಾರ್ಜುನನೇ ಗಂಡನೆನಗೆ. ಆನು ಚನ್ನಮಲ್ಲಿಕಾರ್ಜುನಂಗೆ ಮದುವಳಿಗೆ. ಎನಗೆ ಬೇರೆ ಶೃಂಗಾರವೇಕೆ ಹೇಳಿರವ್ವಾ !

ಎಂದು ಶರಣೆಯರನು ಕೇಳುವಳು. ಅಕ್ಕನು ಹೊರಗಿನ ಯಾವ ಅಲಂಕಾರಕ್ಕೂ ಮೈಯೊಡ್ಡಲಿಲ್ಲ ಬೆಂಡುಬಾಸಿಗ ತೊಂಡಿಲಗಳನ್ನು ಕಟ್ಟಿಕೊಳ್ಳಲಿಲ್ಲ. ಯಾವ ಪೀತಾಂಬರವನ್ನೂ ಉಡಲಿಲ್ಲ. ದಿಗಂಬರವೇ ದಿವ್ಯಾಂಬರವಾಗಿ, ರುದ್ರಾಕ್ಷಿಗಳೇ ಮೈದೊಡಿಗೆಯಾಗಿ, ಶರಣರ ಪಾದಗಳೇ ತೊಂಡಿಲಬಾಸಿಗವಾಗಿ ಮಂಟಪಕ್ಕೆ ಬರುವಳು. ಇತ್ತ ಚರ್ಮಾಂಬರಧಾರಿಯಾದ ಭಸ್ಮೋದ್ಧೂಳಿತನಾದ ರುಂಡಮಾಲೆಯಿಂದಲಂಕೃತನಾದ ಮಲ್ಲಿಕಾರ್ಜುನನೂ ಬರುವನು. ಇಬ್ಬರನ್ನೂ ಹಸೆಯಮೇಲೆ ಕೂಡ್ರಿಸಿ, ಕಂಕಣವಕಟ್ಟಿ, ಸೇಸೆಯನಿಕ್ಕಿ ಶರಣ–ಶರಣೆಯರೆಲ್ಲರೂ ಸೇರಿ ಒಳ್ಳೇ ವಿಜೃಂಭಣೆಯಿಂದ ಮದುವೆಯ ಮಾಡುವರು. ಆಯಿತು. ಬಹುದಿನದ ಬಯಕೆ ಇಂದು ಕೈಗೂಡಿತು. ಅಕ್ಕನ ಆನಂದಕ್ಕೆ ಪಾರವೇ ಇಲ್ಲದಾಯಿತು.



# ಮನೆ (ನ) ದುಂಬಿಸುವ ಕಾರ್ಯ.

ಮದುವೆಯಾದಮೇಲೆ ವರನ ಮನೆಗೆ ವಧುವನ್ನು ಕಳಿಸುವ ಕಾರ್ಯಕ್ಕೆ ಮನೆದುಂಬಿಸುವ ಕಾರ್ಯ ಅಥವಾ ನಿಷೇಕವೆಂದು ಲೌಕಿಕದಲ್ಲಿ ಕರೆಯುವುದು ಎಲ್ಲರಿಗೂ ತಿಳಿದ ಮಾತು. ಸತಿಯೇ ಪತಿಯ ಮನೆಗೆ ಹೋಗುವದರಿಂದ ಇದಕ್ಕೆ ಹೊಸಮಲಗಿತ್ತಿಯ ಕಾರ್ಯವೆಂತಲೂ ಲೌಕಿಕದಲ್ಲಿ ವಾಡಿಕೆಯಿದೆ. ಆದರೆ ನಮ್ಮ ಮಹಾದೇವಿಯು ಮಲ್ಲಿಕಾರ್ಜುನನನ್ನೇ ತನ್ನ ಮನೆಗೆ (ಮನಕ್ಕೆ) ಬರಮಾಡಿಕೊಳ್ಳುತ್ತಾಳೆ. ಆದುದರಿಂದ ಇದಕ್ಕೆ ಉಭಯ ಸಾಮಾನ್ಯಾರ್ಥವನ್ನು ಸೂಚಿಸುವ 'ಮನೆದುಂಬಿಸುವ ಕಾರ್ಯ' ವೆಂದು ಕರೆವುದೇ ಉಚಿತವಾದುದು. ಇಲ್ಲವೆ ಇದು ಆಧ್ಯಾತ್ಮಿಕ ವಿಚಾರವಾದುದರಿಂದ 'ಮನದುಂಬಿಸುವ ಕಾರ್ಯ' ವೆಂದರೂ ಸಲ್ಲುವದು.

ಇಂದು ಮಾದೇವಿಯ ಮನೆಯಲ್ಲಿ ಮನೆದುಂಬಿಸುವ ದಿನ. ಅಕ್ಕನಿಗೆ ಎಂದೂ ಇಲ್ಲದ ಸೀಮಾತೀತವಾದ ಸಂತಸದ ದಿನ. ಅದಕ್ಕಾಗಿ ತಾನು ತನ್ನನ್ನು ಅಲೌಕಿಕ ಅಲಂಕಾರಗಳಿಂದ ಅಲಂಕರಿಸಿಕೊಂಡಿದ್ದಾಳೆ ಹಾಗು ತನ್ನ ಸಖಿಯರಾದ ಶರಣೆಯರನ್ನು ಕುರಿತು—

"ಇಂದೆನ್ನ ಮನೆಗೆ ಗಂಡ ಬಂದಿಹನೆಲಗವ್ವಾ. ನೀವು ನಿಮಗೆಲ್ಲ ಶೃಂಗಾರವ ಮಾಡಿಕೊಳ್ಳಿ. ಚನ್ನಮಲ್ಲಿಕಾರ್ಜುನನೀಗಳೇ ಬಂದಿಹನು. ಇದಿರುಗೊಳ್ಳಬನ್ನಿರೇ ಅವ್ವಗಳಿರಾ!"

ಎಂದು ಸಂತಸದ ಆತುರದಿಂದ ಆಹ್ವಾನವನ್ನಿತ್ತಿದ್ದಾಳೆ. ಎಲ್ಲರೂ ನೆರೆದು ಇದಿರುಗೊಂಡು ಮಲ್ಲಿಕಾರ್ಜುನನನ್ನು ಮನೆಗೆ ಬರಮಾಡಿಕೊಂಡಿದ್ದಾರೆ. ಮಾಡುವ ವಿಧಾನಗಳೆಲ್ಲಾ ಮಾಡಿತೀರಿಸಿದ್ದೂ ಆಗಿದೆ.

ಏಕಾಂತವಾಸದಲ್ಲಿ ಮಹಾದೇವಿಯು ಮಲ್ಲಿಕಾರ್ಜುನನಿಗೆ ತನಗಾದ ಆನಂದವನ್ನೂ ಆತನೊಲ್ಮೆಗಾಗಿ ಹಿಂದೆ ಕಷ್ಟಬಟ್ಟ ತನ್ನ ಪರಿಯನ್ನೂ ಸರಸದಿಂದ ಹೇಳಿಕೊಳ್ಳಲು ಆರಂಭಿಸಿದ್ದಾಳೆ. ದೇವ! ಸಧ್ಯದಲ್ಲಿ ತಾವು ಬಂದುದಕೆ ನನಗಾದ ಆನಂದಕ್ಕೆ ಎಲ್ಲೆಯೇ ಇಲ್ಲದಾಗಿದೆ. ನಿಮ್ಮ ಈ ಎರವಿಲ್ಲದೊಲವನುಂಡು ಧನ್ಯಳಾದೆ.

> “ಆರಲುಗೊಂಡ ಕೆರೆಗೆ ತೊರೆಬಂದು ಹಾಯ್ದಂತೆ, ಬರಲುಗೊಂಡ ಸಸಿಗೆ ಮಳೆ ಸುರಿದಂತಾಯಿತ್ತು ನೋಡಾ! ಇದೇ ಎನಗೆ ಇಹದ ಸುಖ, ಪರದ ಗತಿ, ನಡೆದುಬಂದಂತಾಯಿತ್ತೆನಗೆ. ಚನ್ನಮಲ್ಲಿಕಾರ್ಜುನದೇವ! ನಿಮ್ಮ ಪಾದವ ಕಂಡು ಧನ್ಯಳಾದೆನು.”

ಎಂದು ಗದ್ಗದಿತ ಕಂಠದಿಂದ ಗಂಡನ ಮುಂದೆ ತನ್ನ ಧನ್ಯವಾದವನ್ನು ಮಾಡಿಕೊಳ್ಳುತ್ತಾಳೆ. ಮತ್ತೆ ಓ ದೇವ! ಈ ನಿಮ್ಮ ಮನದೊಲುಮೆಗಾಗಿ ನಾನು —

> “ಹಗಲು ನಾಲ್ಕು ಜಾವ ನಿಮ್ಮ ಕಳವಳದಲ್ಲಿಪ್ಪೆ ನೋಡಯ್ಯ! ಇರುಳು ನಾಲ್ಕು ಜಾವ ನಿಮ್ಮ ವಿಕಳಾವಸ್ಥೆಯಲ್ಲಿಪ್ಪೆ ನೋಡಯ್ಯ! ಇರುಳು ಹಗಲು ನಿಮ್ಮ ಕಳವಳದಲ್ಲಿ ಮರೆದೊರಗಿದೆನಯ್ಯ; ಚನ್ನಮಲ್ಲಿಕಾರ್ಜುನಾ, ನಿಮ್ಮ ನೊಲುಮೆನಟ್ಟು ಹಸಿವು ತೃಷೆ ನಿದ್ರೆಯ ಮರೆತೆನು.”

ಇನಿತೊಂದು ಕಷ್ಟ–ಸಂಕಟಗಳನ್ನು ಸೋಸಿದೆನು. ಆ ಕಷ್ಟಕ್ಕೆ ತಕ್ಕ ಫಲವು ಇಂದು ಈ ಶರಣರ ಸಂಗದಿಂದ ನಿನ್ನ ಒಲುಮೆಯಿಂದ ಉಂಟಾಯಿತು. ನನ್ನ ಬಹುದಿನದ ಹೃದಯದ ಹರಿಕೆ ಇಂದು ಪೂರೈಸಿತು. ಹಿಂದಿನ ಬರಿಗನಸು ಇಂದು ನವಿಗನಸಾಗಿ ಪರಿಣಮಿಸಿತು. ನನ್ನ ತ್ರಿಕರಣಗಳೂ ಸಂತಸದಿಂದ ತುಂಬಿ ತುಳುಕಾಡುತ್ತಿವೆ. ನಿನ್ನ ನಾಮ–ರೂಪುಗಳಿಂದ ಭರಿತವಾಗಿವೆ. ನನಗಿನ್ನಾವ ಆಶೆಯೂ ಇಲ್ಲ.

> "ತನು ನಿಮ್ಮ ರೂಪಾದ ಬಳಿಕ ನಾನಾರಿಗೆ ಮಾಡುವೆ. ಮನ ನಿಮ್ಮ ರೂಪಾದ ಬಳಿಕ ನಾನಾರ ನೆನಸುವೆ. ಪ್ರಾಣ ನಿಮ್ಮ ರೂಪಾದ ಬಳಿಕ ನಾನಾರನಾರಾಧಿಸುವೆ. ಅರಿವು ನಿಮ್ಮಲ್ಲಿ ಸ್ವಯವಾದಬಳಿಕ ನಾನಾರನರಿವೆ. ಚೆನ್ನಮಲ್ಲಿಕಾರ್ಜುನಾ! ನಿಮ್ಮಲ್ಲಿ ನೀವಾಗಿ ನಿಮ್ಮಿಂದ ನಿಮ್ಮ ಮರದೆನಯ್ಯಾ!"

ಎಂದು ತನ್ನ ಔತ್ಕಂಠ್ಯದ ಒಲುಮೆಯನ್ನು ಅಭಿವ್ಯಕ್ತಮಾಡುತ್ತಾಳೆ. ಮತ್ತೆ ಈರ್ವರ ಒಲುಮೆಯನ್ನೂ ದೃಢಪಡಿಸುತ್ತಾಳೆ. ನಾನಿನಿತು ನಿಮ ಗೊಲಿದಿರುವಾಗ ನೀವೆನಗೆ ಒಲಿಯದಿರುವುದು ಸಾಧ್ಯವೆ? ಕೆಸರುಮಲ್ಲಿಗೆ ಯರಳಿದಾಗ ನೇಸರನುದಯಿಸದಿರುವನೆ? ಕಡಲವುಕ್ಕಿದಾಗ ಕಡಲ ಊಗನು ಬಾಂದಳದಿ ಜನಿಸದಿರುವನೆ? ಹೀಗೆ ಎನ್ನ ಎದೆದಾವರೆ ಅರಳಿ, ಸಂತಸಗಡಲುಕ್ಕಿ ಹೊರಸೂಸುವಾಗ ನೀವೆನಗೆ ಒಲಿಯದಿರುವಿರೆಂದು ಹೇಳಲಾದೀತೆ? ಆಗದು, ಎಂದಿಗೂ ಆಗದು. ಸೂಜೆಯನ್ನು ಸೂಜೆಗ ಲ್ಲೆಳೆವಂತೆ ಒಲವು ಒಲವನ್ನು ಹುಟ್ಟಿಸದೆ ಬಿಡದು. ನಿಮ್ಮಲ್ಲಿಯೂ ಎನಗಾಗಿ ಒಲವು ಒಡಮೂಡಿದೆ. ನಮ್ಮಿಬ್ಬರ ಹೃದಯಗಳು ಇಂದು ನಿಜವಾಗಿ ಬೆರೆದವು; ಎರಕುಹೊಯ್ದಂತಾದವು ದೇವಾ!

> "ನಾನು ನಿನಗೊಲಿದೆ. ನೀನು ಎನಗೊಲಿದೆ. ನೀನೆನ್ನನಗಲದಿಪ್ಪೆ. ನಾನಿನ್ನನಗಲದಿಪ್ಪೆನಯ್ಯ. ನಿನಗೆ ನನಗೆ ಬೇರೊಂದು ಠಾವುಂಟೆ? ನೀನು ಕರುಣಿಯೆಂಬುದು ನಾನು ಬಲ್ಲೆನು. ನೀನಿರಿಸಿದ ಗತಿ ಯೊಳಗೆ ಇಪ್ಪವಳಾನಯ್ಯ! ನೀನೆ ಬಲ್ಲೆ ಚೆನ್ನಮಲ್ಲಿಕಾರ್ಜುನಾ!"

ಎಂದು ತನ್ಮಯಳಾಗುತ್ತಾಳೆ.

ಅಕ್ಕನು ಬಲುಜಾಣೆ. ತನ್ನ ಮನದಿನಿಯನಾದ ಮಲ್ಲಿಕಾರ್ಜುನನನು, ತನ್ನನ್ನು ಹೆಚ್ಚು ಹೆಚ್ಚಾಗಿ ಪ್ರೀತಿಸುವಂತೆ ಅರ್ಥಪೂರ್ಣವಾಗಿ ಬಲು ಕುಶಲತೆಯಿಂದ ಮಾತಾಡಿದ್ದಾಳೆ. **'ನೀನು ಕರುಣಿಯೆಂಬುದು ನಾನು ಬಲ್ಲೆ'** ಎಂದು ಹೊಗಳಿ ಅವನನ್ನು ತನ್ನ ಪ್ರೇಮದಿಂದ ಚೆನ್ನಾಗಿ ಸೆರೆಹಿಡಿದಿದ್ದಾಳೆ. **'ನೀನಿರಿಸಿದಂತಿಪ್ಪೆನೆಂದು'** ಹೇಳಿ ಆತ

ನನ್ನ ಇನ್ನೂ ಭಕ್ತಿಲಂಪಟನನ್ನಾಗಿ ಮಾಡಿಬಿಟ್ಟಿದ್ದಾಳೆ. 'ನೀನೇಬಲ್ಲೆ' ಎಂದು ಹೇಳಿ ತನ್ನ ಎಲ್ಲ ಹೊಣೆಯನ್ನೂ ಆತನಮೇಲೆ ಇರಿಸಿದ್ದಾಳೆ. ಹೀಗೆ ಅಂತರಂಗದಲ್ಲಿ ಮಹಾದೇವಿ ಮಲ್ಲಿಕಾರ್ಜುನರು ಸೇರಿ ಒಂದಾಗಿದ್ದಾರೆ. ದಿವ್ಯಸಂಸಾರಿಗಳಾಗಿದ್ದಾರೆ.

## ಅಕ್ಕನ ಬಂಧು-ಬಳಗ.

ಅಕ್ಕನ ಅಧ್ಯಾತ್ಮಿಕ ಪ್ರಪಂಚಕ್ಕೂ ತಕ್ಕ ಬಂಧು-ಬಳಗವಿಲ್ಲದಿರಲಿಲ್ಲ. ಬಂಧುಗಳೆಂದರೆ ಬಾಳಿನಲ್ಲಿ ಬರುವ ಸುಖ-ದುಃಖಗಳಿಗೆ ನೆರವಾಗುವ ಒಂದು ಗುಂಪು. ಸುಖವಿದ್ದಾಗ ಹತ್ತಿರ ಸುಳಿದಾಡಿ ದುಃಖದಾರಿದ್ರ್ಯಗಳು ಬಂದಾಗ ದೂರಾಗುವವರು ಎಂದಿಗೂ ಬಂಧುಗಳಾಗಲಾರರು. ಆಪತ್ತು ಬಂದಾಗೂ ಆಗುವವರೇ ಬಂಧುಗಳು. 'ಆಪತ್ತಿನೋಳ್ ಮಣಿದುಂ ನೋಡದ ಬಂಧುವೇತಕೆ?' ಎಂಬ ಸೋಮೇಶ್ವರನ ನೀತಿಯಂತೆ ಬರೀ ಸಂಪತ್ಕಾಲದಲ್ಲಿ ಸುಖಸಮಯದಲ್ಲಿ ಸುಳಿದಾಡುವ ಸ್ವಾರ್ಥಶುಷ್ಕ ಬಂಧುಗಳಿದ್ದರೆ ಏನು ಪ್ರಯೋಜನ? ಬಂಧುವಾದರೆ ಹೃದಯವೊಂದಾಗಿರಬೇಕು. ಅನುವು-ಆಪತ್ತುಗಳಿಗೆ ಆಶ್ರಯದಾತರಾಗಬೇಕು. ಅವರೇ ನಿಜವಾದ ಬಂಧುಗಳು. ಅಕ್ಕನ ಬಳಗವು ಇಂತಹದಿತ್ತು.

ಅಕ್ಕನ ತವರೂರು ಕಲ್ಯಾಣ. ಅಕ್ಕನ ಮನೆ ಬಸವಣ್ಣನವರ ಮನೆ. ತಾಯಿ ನೀಲಮ್ಮ. ತಂದೆ ಬಸವಣ್ಣ. ಅಣ್ಣ ಕಿನ್ನರಯ್ಯ. ಮಾವ ಪ್ರಭು. ಗಂಡ ಮಲ್ಲಿಕಾರ್ಜುನ. ಉಳಿದ ಶಿವಶರಣ-ಶಿವಶರ

ಗೆಯರೆಲ್ಲರೂ ಬಾಂಧವರು. ಇದು ಬರೀ ನನ್ನ ಕಲ್ಪನೆಯಲ್ಲ. ಅಕ್ಕನ ಮಾತಿನಲ್ಲಿಯೇ ಕೇಳಿ!

> "………ಅಪ್ಪ ನೀಲಮ್ಮನ ಬೋಧದ ಮಗಳು.* ಅಪ್ಪ ಬಸವಣ್ಣನ ಸುಚಿತ್ತದ ಪುತ್ಥಳಿ. ನಿಃಕಳಂಕ ಸಮ್ಮುಖ ಪ್ರಭುದೇವರ ಸತ್ಯದ ಸೊಸೆಯು. ಚೆನ್ನಮಲ್ಲಿಕಾರ್ಜುನನ ಧರ್ಮಾಂಗನೆಯು. ಚಿಕ್ಕಯ್ಯ ಪ್ರಿಯ ಸಿದ್ಧಲಿಂಗನೊಡಹುಟ್ಟಿದಳು………"

> "ಎನ್ನಂತೆ ಪುಣ್ಯಗೈದವರುಂಟೆ? ಎನ್ನಂತೆ ಭಾಗ್ಯಗೈದವರುಂಟೆ! ಕಿನ್ನರನಂತಪ್ಪ ಸಹೋದರನೆನಗೆ. ಏಳೇಳು ಜನ್ಮದಲ್ಲಿ ಶಿವಭಕ್ತರೇ ಬಂಧುಗಳೆನಗೆ. ಚೆನ್ನಮಲ್ಲಿಕಾರ್ಜುನನಂತಪ್ಪ ಗಂಡ ನೋಡಾ ಎನಗೆ."

ತನ್ನ ಆಶೆ–ಆಕಾಂಕ್ಷೆಗಳನ್ನು ಈಡೇರಿಸಿಕೊಟ್ಟ ಬಂಧು-ಬಳಗದ ಹೆಸರುಗಳನ್ನು ಅಕ್ಕನು ಹಿಗ್ಗಿ ಹೆಚ್ಚಿ ಒಕ್ಕೇ ಔತ್ಕಂಠ್ಯದಿಂದ ಹೇಳಿಕೊಂಡಿದ್ದಾಳೆ.



* ನೀಲಾಂಬಿಕೆಯನ್ನು ಕಣ್ಣಾರೆ ಕಂಡ ಅಕ್ಕನು, ನೀಲಮ್ಮಗಳು ಬಸವಣ್ಣನವರ ಧರ್ಮಪತ್ನಿಯೆಂದು ಈ ವಚನದಿಂದ ಸ್ಪಷ್ಟವಾಗಿ ಒಪ್ಪಿಕೊಂಡಿದ್ದಾಳೆ. ಹರಿಹರದೇವನು ಮಾತ್ರ ಬಸವರಾಜದೇವರ ರಗಳೆಯಲ್ಲಿ "ಸತ್ಕುಲ ಸಾದೃಶ್ಯ ಸುಶೀಲೆಯರಪ್ಪ ಗಂಗಾದೇವಿ-ಮಾಯಾದೇವಿಯರೊಡನೆ ವಿವಾಹ ಸಂಪದದಿಂ ಸಂತಸುಖಮಿರ್ದರ್'' (ಸ್ಥಲ-೬) ನೀಲಮ್ಮನವರ ಹೆಸರನ್ನೇ ಎತ್ತುವದಿಲ್ಲ. ಇದಕ್ಕೆ ಕಾರಣವೇನೋ ತಿಳಿಯದು.

# ಅಕ್ಕನ ಬಂಧುವಾತ್ಸಲ್ಯ.

---

**ಮ**ಣ್ಣುಗೂಡಿ ಹೋಗುವ ತನ್ನ ಮನದಭಿಲಾಷೆಯನ್ನು ಪೂರೈಸಿಕೊಟ್ಟವರು ಶರಣಸಮುದಾಯವು. ತಾನು ಬಹುದಿನ ತಿರುಗಿ, ತಪಿಸಿ ತೊಳಲಿ ಬಳಲಿ ಹೆಂಡಾದರೂ ದೊರೆಯದ ಗಮ್ಯಗುರಿಯನ್ನು ಇಂದು ಈ ಶರಣರು ಹಸ್ತಗತ ಮಾಡಿಕೊಟ್ಟರು. ಇದಕ್ಕಾಗಿ ಶರಣರು ಮಹಾದೇವಿಗೆ ಮಾಡಿದ ಉಪಕಾರವು ಮಿಗಿಲಾದುದು. ಆದ್ದರಿಂದಲೇ ಅಕ್ಕನು ತನ್ನ ವಚನದಲ್ಲಿ **'ಏಳೇಳು ಜನ್ಮದಲ್ಲಿ ಶಿವಭಕ್ತರೇ ಬಂಧುಗಳೆನಗೆ'** ಎಂದು ಹೇಳಿ ಅನಾದೃಶ್ಯವಾದ ತನ್ನ ಬಂಧುವಾತ್ಸಲ್ಯವನ್ನು ತೋರ್ಪಡಿಸಿದ್ದಾಳೆ. ಅವರ ಆ ಉಪಕಾರಕ್ಕೆ ಸರಿಗಟ್ಟುವ- ಸರಿಗಟ್ಟದರೂ ತನಗೆ ತೂಗುವ- ಪ್ರತ್ಯುಪಕಾರವು ಬೇರೆ ಯಾವುದೂ ಮಹಾದೇವಿಗೆ ತೋಚಲಿಲ್ಲ. ಕೊನೆಗೆ ನಿರುಪಾಯಳಾಗಿ ಬರೀ ಬಣ್ಣಿಸಿಬಿಡುವಳು. ಆ ಬಣ್ಣನೆಯ ಸವಿಸೊಬಗನ್ನು ಅಕ್ಕನ ವಚನಗಳಿಂದಲೇ ರುಚಿಸೋಣ.

"ಕಾಮನ ಗೆಲಿದೆನು ಬಸವಾ ನಿಮ್ಮ ದಯದಿಂದ. ಸೋಮಧರನ ಹಿಡಿತಪ್ಪೆನು ಬಸವಾ ನಿಮ್ಮ ಕೃಪೆಯಿಂದ ನಾಮದಲ್ಲಿ ಹೆಂಗುಸೆಂಬ ಹೆಸರಾದರೇನು? ಭಾವಿಸಲು ಗಂಡುರೂಪು. ಬಸವಾ ನಿಮ್ಮ ದಯದಿಂದ ಆ ತ್ರಿಕಾಮಿ ಚೆನ್ನಮಲ್ಲಿಕಾರ್ಜುನಯ್ಯಂಗೆ ತೊಡರಸಿಕ್ಕಿ ಒಡಮರಿಯದೆ ಕೂಡಿದೆನು ಬಸವಾ ನಿಮ್ಮ ಕೃಪೆಯಿಂದ."

"ಮರ್ತ್ಯಲೋಕದ ಭಕ್ತರ ಮನದ ಬೆಳಗಲೆಂದು ಇಳಿತಂದನಯ್ಯಾ ಶಿವನು. ಕತ್ತಲಿಯ ಪಾಳಯವ ರವಿಹೊಕ್ಕಂತಾಯಿತ್ತಯ್ಯಾ. ಚಿತ್ತದ ಪ್ರವೃತ್ತಿಯ ಹಿಂಗಿಸಿ ಮುಕ್ತಿಪಥವ ತೋರಿದನಲ್ಲ ಅಸಂಖ್ಯಾತರುಗಳಿಗೆ. ತನುವೆಲ್ಲ ಸ್ವಯಲಿಂಗ, ಮನವೆಲ್ಲ ಚರಲಿಂಗ,

ಭಾವವೆಲ್ಲ ಮಹಾಘನದ ಬೆಳಗು. ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣ ಸಮ್ಯಜ್ಞಾನಿ ಚನ್ನಬಸವಣ್ಣನ ಶ್ರೀಪಾದಕ್ಕೆ ಶರಣೆಂದು ಎನ್ನ ಭವಂ ನಾಸ್ತಿಯಾಯಿತ್ತಯ್ಯ."

"ಎಲ್ಲ ಎಲ್ಲವನರಿದು ಫಲವೇನಯ್ಯ, ತನ್ನ ತಾನರಿಯಬೇಕಲ್ಲದೆ? ತನ್ನಲ್ಲಿ ಅರಿವು ಸ್ವಯವಾಗಿರಲು ಅನ್ಯರ ಕೇಳಲುಂಟೆ? ಚನ್ನ ಮಲ್ಲಿಕಾರ್ಜುನಾ ನೀ ಅರಿವಾಗಿ ಮುಂದುದೋರಿದ ಕಾರಣ ನಿಮ್ಮಿಂದಲರಿದೆನಯ್ಯ ಪ್ರಭುವೇ."

ಹೀಗೆ ಬಸವ, ಚನ್ನಬಸವ, ಅಲ್ಲಮಪ್ರಭುಗಳನ್ನು ಬೇರೆಬೇರೆಯಾಗಿ ಬಣ್ಣಿಸಿ ಇವರೊಡನೆ ಉಳಿದ ಶರಣರನ್ನೂ ಇದೊಂದೇ ವಚನದಲ್ಲಿ ಹರಿಸುವಳು.

"ಬಸವಣ್ಣನ ಮನೆಯ ಮಗಳಾದ ಕಾರಣ ಭಕ್ತಿಪ್ರಸಾದವ ಕೊಟ್ಟನು. ಪ್ರಭುದೇವರ ತೊತ್ತಿನ ತೊತ್ತಿನ ಮರಿದೊತ್ತಿನ ಮಗಳಾದ ಕಾರಣ ಜ್ಞಾನಪ್ರಸಾದವ ಕೊಟ್ಟನು. ಸಿದ್ಧರಾಮಯ್ಯನ ಶಿಶುವಾದ ಕಾರಣ ಪ್ರಾಣಪ್ರಸಾದವ ಕರುಣಿಸಿ ಕೊಟ್ಟನು ಮಡಿವಾಳಯ್ಯನ ಮನೆಯ ಮಗಳಾದ ಕಾರಣ ನಿರ್ಮಲ ಪ್ರಸಾದವ ನಿಶ್ಚಯಿಸಿ ಕೊಟ್ಟನು. ಇಂತೀ ಅಸಂಖ್ಯಾತ ಗಣಂಗಳೆಲ್ಲರೂ ತಮ್ಮ ಕರುಣದ ಕಂದನೆಂದು ತಲೆದಡಹಿದ ಕಾರಣ ಚನ್ನಮಲ್ಲಿಕಾರ್ಜುನಯ್ಯನ ಶ್ರೀಪಾದಕ್ಕೆ ಯೋಗ್ಯಳಾದೆನು."

ಶರಣರೇ ನಾನೆಂದೆಂದಿಗೂ ಬಿಡದ ಬಾಳುವೆಗೆ ಬಂದುದು ನಿಮ್ಮಿಂದ. ಮಲ್ಲಿಕಾರ್ಜುನನ ಕೈವಿಡಿದು ಚಿರಂತನವಾಗಿ ಬಾಳುವ ಭಾಗ್ಯವನ್ನೂ, ಯೋಗ್ಯತೆಯನ್ನೂ ತಂದುಕೊಟ್ಟವರು ನೀವು. ನಿಮ್ಮ ಈ ತೀರಿಸದ ಉಪಕೃತಿಗೆ ನಾನು ಚಿರಋಣಿ. ಶರಣರೇ! ನಾನೀಗ ಪಡೆದುದು ಕೊರತೆಯಿಲ್ಲದ ಸುಖ. ಇದಕ್ಕಿಂತಲೂ ಬೇರೆ ಇನ್ನೇನೂ ಹಾರೈಸಲಾರೆ. ಏಕೆಂದರೆ—

"ಒಡಲಿಲ್ಲದ, ನುಡಿಯಿಲ್ಲದ, ಕಡೆಯಿಲ್ಲದ ನಲ್ಲನ, ಒಡಗೂಡಿ ಸುಖಿಯಾದೆ; ಕೇಳಿರಯ್ಯ! ಓಸರಿಸೆನನ್ಯಕ್ಕೆ. ಆಸೆ ಮಾಡೆನು

ಭಿನ್ನಸುಖಕ್ಕೆ. ಆರಳಿದು ಮೂರಾಗಿ, ಮೂರಳಿದು ಎರಡಾಗಿ, ಎರಡಳಿದು ಒಂದಾಗಿ ನಿಂದೆನಯ್ಯಾ! ಬಸವಣ್ಣ ಮೊದಲಾದ ಶರಣರಿಗೆ ಶರಣಾರ್ಥಿ. **ಪ್ರಭುವಿನಿಂದ ಕೃತಕೃತ್ಯಳಾದೆನು. ನಾನು ಮರೆಯಲಾಗದು.** ನಾನು ನಿಮ್ಮರಸುವೆನೆಂದು ಎನ್ನನು ಚೆನ್ನಮಲ್ಲಿಕಾರ್ಜುನನ ಬೆರಸೆಂದು ಹರಿಸುತ್ತಿಹುದು."

ಹೀಗೆ ಎಂದಿಗೂ ಮರೆಯದ ಎಲ್ಲ ಶರಣರ ಸಹಾಯವನ್ನು ಪುನಃಪುನಃ ಹೊಗಳಿ ಬಸವಣ್ಣ ಮೊದಲಾದ ಶರಣರಿಗೆ ಶರಣುಮಾಡಿ ತನ್ನ ಮುಂದಿನ ಬಾಳನ್ನು ಮಂಗಳಕರವಾಗಿರಿಸುವಂತೆ ಆಶೀರ್ವಾದವನ್ನೂ ಬಿನ್ನವಿಸಿಕೊಳ್ಳುವಳು.

## ಶ್ರೀಶೈಲ ಗಮನ.

ಅಕ್ಕನು ತನ್ನ ಬಂಧುವಾತ್ಸಲ್ಯವನ್ನು ತೋರ್ಪಡಿಸಿ ಮಲ್ಲಿಕಾರ್ಜುನನ ಊರಿಗೆ (ಗಂಡನೂರಿಗೆ) ಹೊರಡಲನುವಾಗುವಳು. ಅವಳನ್ನು ಕಳುಹಲು ಎಲ್ಲ ಶರಣ-ಶರಣೆಯರೂ ನೆರೆದು ಬರುವರು. ಬಂದ ಶರಣ ಸಂಕುಳವನ್ನು ಕುರಿತು ಅಕ್ಕನು —

"ಹುಟ್ಟಿದೆ ಶ್ರೀಗುರುವಿನ ಹಸ್ತದಲ್ಲಿ, ಬೆಳೆದೆನು ಅಸಂಖ್ಯಾತರ ಕರುಣದೊಳಗೆ. ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ, ಪರಮಾರ್ಥವೆಂಬ ಸಕ್ಕರೆಯನಿಕ್ಕಿದರು ನೋಡಾ! ಇಂತಪ್ಪ ತ್ರಿವಿಧಾಮೃತವ ದಣಿಯಲೆರೆದು ಸಲಹಿದರೆನ್ನ ವಿವಾಹವ ಮಾಡಿ

> ದಿರಿ. ಸಯುವಪ್ಪ ಗಂಡಗೆ ಕೊಟ್ಟಿರಿ. ಕೊಟ್ಟ ಮನೆಗೆ ಕಳುಹ ಲೆಂದು ಅಸಂಖ್ಯಾತರೆಲ್ಲರೂ ನೆರೆಪು ಬಂದಿರಿ. ಬಸವಣ್ಣ ಮೆಚ್ಚಲು ಒಗೆತನವ ಮಾಡುವೆ. ಚನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ಮಂಡಗೆ ಹೂವ ತಾಹೆನಲ್ಲದೆ ಹುಲ್ಲತಾರೆನು. ಅವಧರಿಸಿ ನಿಮ್ಮಡಿಗಳ ಎಲ್ಲರು. ಮರಳಿ ಬಿಜಯಂಗೈವುದು, ಶರಣಾರ್ಥಿ."

ನಾನು ನಿಮ್ಮ ಶಿಶು. ನಿಮ್ಮ ಹಾಲಿನಿಂದ ಬೆಳದೆ. ನಿಮ್ಮಿಂದ ಇಂತಹ ಬಾಳುವೆಗೆ ಬಂದೆ. ಶರಣರೇ ಮುಂದಾದರೂ ನಿಮ್ಮ ಮಂಡೆಗೆ ಹೂವು ತಾಹೆನಲ್ಲದೆ ಹುಲ್ಲು ತಾರೆನು. ಆಹಾ! ಎಂತಹ ಮಾತಿದು. ಗಂಡನ ಕೈವಿಡಿದು ಮುಂದೆ ಬಾಳುವೆಗೆ ಸೇರಲಿರುವ ಸ್ತ್ರೀಸಮಾಜಕ್ಕೇನೆ ದಿವ್ಯ ಸಂದೇಶವಿದು. ಸ್ತ್ರೀಯರೆಲ್ಲರೂ ಈ ಮಾತನ್ನು ಎಂದೆಂದಿಗೂ ಮರೆಯ ದಂತೆ ತಂತಮ್ಮ ಚಿತ್ತ ಭಿತ್ತಿಯಲ್ಲಿ ಚಿರಮುದ್ರಿತವಾಗುವಂತೆ ಮಾಡಿಸಿ ಕೊಳ್ಳಬೇಕು. ವೀರಶೈವಧರ್ಮಕ್ಕನುಗುಣವಾಗಿ ಶರಣಸತಿಯರೂ ಈ ಮಾತನ್ನು ಮರೆಯುವಂತಿಲ್ಲ. ಮೇಲಿನಂತೆ ಅಕ್ಕನು ಅಂತಃಕರಣದಿಂದ ಹೇಳಿಕೊಂಡು ಎಲ್ಲರಡಿಗಳಿಗೂ ಶಿರಬಾಗಿ ಹೊರಡುವಾಗ ಶರಣರ ಅಗ ಲಿಕೆಯ ತಾಪವುಂಟಾಗಿ ಕಂಬನಿದುಂಬಿ ಶಿರವುಬ್ಬಿ ಬರುವುದು. ಆಗ—

> "ಅಯ್ಯಾ ನಿಮ್ಮ ಮಹಂತರ ಕೂಡಿದ ಸುಖವನು ಉಪಮೆಗೆ ತರಬಾರದಯ್ಯಾ! ಅಯ್ಯಾ ನಿಮ್ಮ ಮಹಂತರ ಕೂಡಿ ಅಗಲುವ ಧಾಪತಿಯಿಂದ ಸಾವುದೇಕರಲೇಸಯ್ಯಾ........."

ಎಂದು ಅತ್ತ ಶರಣರಿಗೆ ಅಗಲಿ ಹೋಗಲಾರದ ದುಃಖವನ್ನು ಹೇಳಿ ಕೊಳ್ಳುತ್ತ ಕಂಬನಿಯನೊಂದೊಂದಾಗಿ ಸುರಿಸುತ್ತ ಇತ್ತ "ಚನ್ನಮಲ್ಲಿ ಕಾರ್ಜುನಯ್ಯಾ! ನಿಮ್ಮ ನಿಜವನರಿದ ಮಹಾಮಹಿಮರನಗಲಿ ನಿಲಲಾರೆ ನಯ್ಯಾ" ತನ್ನ ಗಂಡನಿಗೆ ನಿಮ್ಮನರಿದ ಈ ಮಹಿಮರನಗಲಿ ಹೇಗೆಬರಲಿ? ಎಂದು ಹೇಳಿ ಗಟ್ಟಿಯಾಗಿ ಅಳಲಾರಂಭಿಸುವಳು. ಶರಣೆಯರೆಲ್ಲರೂ ಕಣ್ಣೀರಸುರಿಸುವರು. ಬಸವ ಅಲ್ಲಮಾದಿಗಳು ಸಂತವಿಡುವರು.

ಏನನ್ನೋ ಹೇಳಿ ಗಂಡನಮನೆಗೆ ಹೋಗಲು ಒಪ್ಪಿಸುವರು. ಅಕ್ಕನು ಅರುವಿಗೆಬಂದು ಆಗಲೆಂದು ಒಪ್ಪಿ ದುಃಖವನ್ನು ಸಾವರಿಸಿಗೊಂಡು ಮತ್ತೊಮ್ಮೆ ಶರಣರಿಗೆಲ್ಲ ವಂದಿಸುವಳು. ಆಗ ಶರಣರು ಅವಳ ಅಪಾರ ವಾದ ಮಹಿಮೆಯನ್ನು ಕಂಡು ಒಬ್ಬೊಬ್ಬರಾಗಿ ಹೊಗಳುವರು.

"ಹೆಂಗಸಿನ ಅಂಗವನೋಡಿರೇ ಪುರಾತನರು. ಬಾಲತನದಂಗವ ನೋಡಿರೇ ಪುರಾತನರು. ಬ್ರಹ್ಮವನಾಚರಿಸಿ ತನ್ನ ಮರೆದಿಪ್ಪುದ ನೋಡಿರೇ ಲಿಂಗವಂತರು. ತನ್ನಲ್ಲಿ ತಾನು ನಿಶ್ಚಯವಾಗಿ, ಭಾಷೆ ಬೀಸರವೋಗದೆ ಇಪ್ಪ ಇರವು ಕೂಡಲಸಂಗಮ ದೇವರಲ್ಲಿ ನಮ್ಮ ಮಹದೇವಿಯಕ್ಕಂಗಾಯಿತ್ತು."

ಎಂದು ಬಸವಣ್ಣನವರು ಬಗೆಮುಂಬಿ ಬಣ್ಣಿಸುವರು. ಅನಂತರ—

"ಅಂಗೈಯ್ಯ ಲಿಂಗದಲ್ಲಿ ಕಂಗಳ ನೋಟ ಸ್ವಯವಾದ ಇರವ ನೋಡಾ! ತನ್ನ ಸ್ವಾನುಭಾವದ ಉದಯದಿಂದೆ ತನ್ನನರಿದ ನಿಜ ಶಕ್ತಿಯ ನೋಡಾ! ಭಿನ್ನವಿಲ್ಲದಿರವು ಮುನ್ನಹೆಯ ಮಮಕಾರವ ಮೀರಿದ ಭಾವ ತನ್ನಿಂದ ತಾನಾದಳು. ನಮ್ಮ ಗುಹೇಶ್ವರ ಲಿಂಗ ದಲ್ಲಿ ಸಂದಿಲ್ಲದಿಪ್ಪ ಮಹಾದೇವಿಯಕ್ಕನ ನಿಲವಿಂಗೆ ನಮೋ ನಮೋ ಎನುತಿರ್ದೆ ಕಾಣಾ ಚನ್ನಬಸವಣ್ಣಾ!"

ಹೀಗೆಂದು ಪ್ರಭುದೇವರು ಪರಿಣಮಿಸಿ ನಿರೂಪಿಸಲು ಇದನ್ನು ಕೇಳಿ ಚನ್ನಬಸವಣ್ಣನವರು ಪ್ರಸನ್ನ ಹೃದಯರಾಗಿ—

"ಅಜಕೋಟಿ ವರುಷವವರೆಲ್ಲರು ಹಿರಿಯರೆ! ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರು ಹಿರಿಯರೆ? ನಡುಮುರಿದು, ಗುಡ ಗೂರಿ, ತಲೆ ನಡುಗಿ, ನರೆ ತರೆ ಹೆಚ್ಚಿ, ಮತಿಗೆಟ್ಟು, ಒಂದನಾಡ ಹೋಗಿ, ಒಂಬತ್ತನಾಡವ ಅಜ್ಞಾನಿಗಳೆಲ್ಲರು ಹಿರಿಯರೆ? ಅನು ವರಿದು ಘನವತಿರಿಸಿ ಹಿರಿದು ಕಿರಿದೆಂಬ ಭೇದವ ಮರೆದು ಕೂಡಲ ಚನ್ನಸಂಗಯ್ಯನಲ್ಲಿ ಬೆರೆಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹದೇವಿಯಕ್ಕಂಗಾಯಿತ್ತು."

ಇಂತು ಎಲ್ಲರೂ ಮೆಚ್ಚುವಂತೆ ಕೊಂಡಾಡುವರು. ಈ ಹುಮ್ಮಸದ ಮಾತನ್ನು ಕೇಳಿ ಶುದ್ಧಹೃದಯರಾದ ಸಿದ್ಧರಾಮ ತಂದೆಗಳು ಅದನ್ನೇ ಪುಷ್ಟೀಕರಿಸಿ—

"ಅಹುದಹುದು. ಮತ್ತೇನು? ಮರಹಿಂಗೆ ಹಿರಿದು-ಕಿರಿದುಂಟೆಲ್ಲದೆ ಅರುಹಿಂಗೆ ಹಿರಿದು-ಕಿರಿದುಂಟೆ ಹೇಳಯ್ಯಾ? ಸಾವಿಂಗೆ ಭಯವುಂಟಲ್ಲದೆ ಅಜಾತಂಗೆ ಭಯವುಂಟೆ ಹೇಳಯ್ಯಾ? ಕಪಿಲಸಿದ್ಧಮಲ್ಲಿನಾಥಯ್ಯನಲ್ಲಿ ಮಹದೇವಿಯಕ್ಕನ ನಿಲವಿಂಗೆ ಶರಣೆಂದು ಶುದ್ಧನಾದೆನು ಕಾಣಾ ಚನ್ನಬಸವಣ್ಣಾ!"

ಎಂದು ನಚ್ಚಿನ ಕೆಚ್ಚೆದೆಯಿಂದ ತುತಿಸುವರು. ಕಡೆಗೆ ಮಡಿವಳಮಾಚಿದೇವರು —

"ಕಾಮಿಯಾಗಿ ನಿಃಕಾಮಿಯಾದವಳು. ಸೀಮೆಯಲ್ಲಿರ್ದು ನಿಸ್ಸೀಮೆಯಾದವಳು. ಭವಿಯ ಸಂಗವ ತೊರೆದು, ಭವಬಾಧೆಯ ಹರಿದವಳು ಬಸವಣ್ಣ ಗತಿಯೆಂದು ಬರಲು, ನಾನು ಮಡಿಯ ಹಾಸಿ ನಡೆಸಿದೆ. ನಡೆವುದಕ್ಕೆ ಹಾಸಿದ ಮಡಿಯ ಸರ್ವಾಂಗಕ್ಕೆ ಹೊದ್ದಳು. ಆ ಮಡಿಯ ಬೆಳಗಿನೊಳಗೆ ನಿರ್ವಯಲಾದವಳು. ಕಲಿದೇವರದೇವಯ್ಯಾ! ಮಹದೇವಿಯಕ್ಕಗಳ ನಿಲವ ಬಸವಣ್ಣನ ಕೃಪೆಯಿಂದಲರಿದೆನಯ್ಯಾ ಪ್ರಭುವೆ"

ಹೀಗೆಂದು ಹೇಳಿ ಹೊಗಳುವರು? ಅದಕ್ಕೆ ಪ್ರಭುದೇವರು —

"ಮುಡಿಗೆಡೆಗುಡದ ಘನವ ಹಿಡಿದು, ವಡಬಂದಿಯಾದವಳು. ಎಡೆಯಿಲ್ಲದ ಪರಿಪೂರ್ಣದೊಳಗೆ ಮುಡಿಗೆಟ್ಟಳು. ತನ್ನ ನಿಲುಕಡೆಯ ನಿಜವ ತಾನರಿಯದಂತೆ ತನ್ನಿಂದ ಕೇಳಿ ಸ್ವಯವಾದಳು. ಗುಹೇಶ್ವರ ಸಾಕ್ಷಿಯಾಗಿ **ಮಹದೇವಿಯಕ್ಕನ ನಿಲವ ಕೊಂಡಾಡುವದಕ್ಕೆ ತೆರಹಿಲ್ಲ ಕಾಣಾ ಮಡಿವಾಳಯ್ಯಾ!"**

ಅಕ್ಕನ ಮೈಮೆ ಬಣ್ಣಿಸಲಸದಳವು. ಅದಕ್ಕೆ ತುದಿಮೊದಲೆಂಬುದಿಲ್ಲ. ನಾವೆಷ್ಟು ಕೊಂಡಾಡಿದರೂ ಅದು ಸ್ವಲ್ಪೆ ಎಂದು ಕೊನೆಯ ಸಿದ್ಧಾಂತ

ವನ್ನು ಹೇಳಿ ಮುಗಿಸಲು ಅದಕ್ಕೆ ಅಕ್ಕಗಳು ತಮ್ಮ ಸ್ವಾಹಂಕಾರ ನಿರಸನ ಮಾಡಿಕೊಳ್ಳುವರು.

"ಅಯ್ಯಾ ನಿಮ್ಮ ಅನುಭಾವಿಗಳ ಸಂಗದಿಂದ ಎನ್ನ ತನು ಶುದ್ಧವಾಯಿತ್ತು. ಅಯ್ಯಾ ನಿಮ್ಮ ಅನುಭಾವಿಗಳು ಎನ್ನ ಒರಿದೊರಿಮು, ಕಡಿಕಡಿಮು, ಅರದರದು ಅನುಮಾಡಿದ ಕಾರಣ ಎನ್ನ ಮನ ಶುದ್ಧವಾಯಿತ್ತು. ಎನ್ನ ಸರ್ವ ಭೋಗಾದಿ ಭೋಗಂಗಳೆಲ್ಲ ನಿಮ್ಮ ಶರಣರಿಗರ್ಪಿತವಾಗಿ ಎನ್ನ ಪ್ರಾಣ ಶುದ್ಧವಾಯಿತ್ತು. ಎನ್ನ ಸರ್ವೇಂದ್ರಿಯಂಗಳೆಲ್ಲವು ನಿಮ್ಮ ಶರಣರ ಪ್ರಸಾದವ ಕೊಂಡ ಕಾರಣ ಎನ್ನ ಸರ್ವಾಂಗ ಶುದ್ಧವಾಯಿತ್ತು, ಅಯ್ಯಾ ನಿಮ್ಮ ಶರಣರಿಂತು ಎನ್ನನಾಗುಮಾಡಿದ ಕಾರಣ ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣರಿಗೆ ತೊಡಿಗೆಯಾದೆನಯ್ಯ ಪ್ರಭುವೆ."

ಹೀಗೆ ಎಲ್ಲವೂ ತಮ್ಮಿಂದಲೇ ಆದುದೆಂದು ಹೇಳಿ ಪೊಡಮಟ್ಟು ಹೇಗೋ ಶ್ರೀಗಿರಿಗೆ ಹೊರಟು ಹೋಗುವಳು, ಕಾಣುವವರೆಗೆ ನೋಡಿ ಕೊನೆಗೆ ಶರಣರು ಮರಳಿ ಕಲ್ಯಾಣಕ್ಕೆ ಬರುವರು.



# ಶ್ರೀಗಿರಿಯ ಆರೋಹಣ.

---

ಮಹಾದೇವಿಯು ಕನಿಕರದಿಂದ ಶರಣರನಗಲಿ ಈಗ ಶ್ರೀಶೈಲಕ್ಕೆ ಬಂದಿದ್ದಾಳೆ. ಶ್ರೀಗಿರಿಯನೇರಿ ಚನ್ನಮಲ್ಲಿಕಾರ್ಜುನನ ಕೈವಿಡಿಯಲೆಳಸುತ್ತಾಳೆ. ಆ ಸೊಗಸನಿಲ್ಲಿ ಕೇಳಿ!

> "ಮೂಲಧ್ವಾರದ ಬೇರವ ಮೆಟ್ಟಿ ಭೂಮಂಡಲವನೇರಿದೆ. ಆಚಾರದ ಬೇರ ಹಿಡಿದು ಐಕ್ಯದ ತುದಿಯನೇರಿದೆ. ವೈರಾಗ್ಯದ ಸೋಪಾನದಿಂದ ಶ್ರೀಗಿರಿಯನೇರಿದೆ. ಕೈವಿಡಿಯ ತೆಗೆದುಕೊಳ್ಳಾ ಚನ್ನಮಲ್ಲಿಕಾರ್ಜುನಾ !"

ಅಹಂಕಾರದ ಬೇರುಕಿತ್ತು, ಆಚಾರದ ಕೋಲು ಹಿಡಿದು, ವೈರಾಗ್ಯವೆಂಬ ಸೋಪಾನದ ಸಹಾಯದಿಂದ ತನ್ನ ನಲ್ಲನಾದ ಚನ್ನಮಲ್ಲಿಕಾರ್ಜುನನಿಗೆ ಮನೆಯಂತಿದ್ದ ಶ್ರೀಗಿರಿಯನೇರಿ, (ಮೊದಲೇರಿನಿಂತ ಗಂಡನಿಗೆ) ಲಲ್ಲೆಯಿಂದ ಕೈವಿಡಿದೆತ್ತಿಕೋ ಎಂದು ಹೇಳುವ ಮಾತಿನಲ್ಲಿ ಎಂತಹ ಸವಿಯಿದೆ; ಎಷ್ಟೊಂದು ಅರ್ಥಪೂರ್ಣವಾಗಿದೆ. ಅವಳ ಇಡೀ ಬಾಳಿನ ತಿರುಳೇ ಈ ವಚನದಲ್ಲಿ ಹುದುಗಿಕೊಂಡಿದೆ; ಹೆಪ್ಪುಗೊಂಡಿದೆ. ಅಂತು ಮಹಾದೇವಿಯು ಮಲ್ಲಿಕಾರ್ಜುನನ ಕೈಯಲ್ಲಿ ಕೈಕೊಟ್ಟು ಮೇಲೇರಿದ್ದಾಳೆ. ತನ್ನ ಚನ್ನನ ಚಲುವನ್ನು ನೋಡಿ ನೋಡಿ ತನ್ನ ಅಮರವಾದ-ಅನಾದೃಶವಾದ ಕವಿವಾಣಿಯಿಂದ—

> "ಹೊಳೆವ ಕೆಂಜೆಡೆಗಳ, ಮಣಿಮಕುಟ, ಸುಲಿಪಲ್ಲ, ನಗೆಮೊಗವ ಕಂಗಳ ಕಾಂತಿಯಿಂ ಈರೇಳು ಭುವನವುಂ ಬೆಳಗುವ ದಿವ್ಯ ಸ್ವರೂಪನ ಕಂಡೆ ನಾನು. ಕಂಡೆನ್ನ ಕಂಗಳ ಬರ ಹಿಂಗಿತ್ತಿಂದು ಗಂಡಗಂಡರೆಲ್ಲ ಹೆಂಡಹೆಂಡರಾಗಿ ಆಳುವ ಗುರುವನ ಕಂಡೆ

ನಾಸು. ಜಗದಾದಿ ಶಕ್ತಿಯೊಳು ಬೆರಸಿ ಒಡನಾಡುವ ಪರಮಗುರು
ಚೆನ್ನಮಲ್ಲಿಕಾರ್ಜುನನ ನಿಲವ ಕಂಡು ಬದುಕಿದೆನು."

ಎಂದು ಹಾಡಿ ಹಾಡಿ ನಲಿವಳು. ಹರುಷಶರಧಿಯಲ್ಲಿ ಈಜಾಡುವಳು. ಮತ್ತೆ ಮತ್ತೆ ಆ ಮಲ್ಲಿಕಾರ್ಜುನನ ಚಲುವನ್ನು ಕಂಡು ಕಂಡು ಸ್ವೈರ ನಾಗುವಳು.

ಅಕ್ಕನು ಮೇಲಿನ ವಚನದ ಕೊನೆಯ ಎರಡು ಮಾತುಗಳಲ್ಲಿ ವೀರಶೈವರ ಅಪಾರವಾದ ಸಿದ್ಧಾಂತವನ್ನು ತುಂಬಿದ್ದಾಳೆ. ತನ್ನ ಜೀವನಕ್ಕೆ ಸಂಬಂಧಿಸಿದ ಅನುಪಮವಾದ ಅನುಭವವನ್ನೂ ಒಡಮೂಡಿ ಸಿದ್ದಾಳೆ. 'ಗಂಡಗಂಡರೆಲ್ಲರ ಹೆಂಡಹೆಂಡರಾಗಿ ಆಳುವ ಗುರುವನಕಂಡೆ' ಎಂಬ ಮಾತಿನಿಂದ 'ಶರಣಸತಿ ಲಿಂಗಪತಿ' ಎಂಬ ಸಿದ್ಧಾಂತವೇ ಸತ್ಯ ನೆಂಬುದನ್ನೂ ಲೋಕದ ಈ ಗಂಡರಿಗೂ ಗಂಡನಾದ ಮಹಾ ವೀರನು ತನ್ನ ಗಂಡನು ಎಂಬುದನ್ನೂ ತೋರಿಸಿದ್ದಾಳೆ. ಹೀಗೆ ಅರ್ಥಮಾಡು ವಾಗ ಇಲ್ಲಿ ಅಕ್ಕನು ಉಪಯೋಗಿಸಿದ 'ಗುರುವ' ಶಬ್ದವು ಹೆಚ್ಚು ಅರ್ಥ ಪೂರ್ಣವಾಗಿದೆ. ಇನ್ನು 'ಜಗದಾದಿ ಶಕ್ತಿಯೊಳು ಬೆರಸಿ ಒಡನಾಡುವ' ಎಂಬಲ್ಲಿ 'ಶಕ್ತಿವಿಶಿಷ್ಟಾದ್ವೈತ' ಮತವೇ ಮತವೆಂಬುದನ್ನೂ ಈಗ ತನಗೊಲಿದಿರುವವರಿಂದ ತಾನು ಜಗದಾದಿ ಶಕ್ತಿಸ್ವರೂಪಳೆಂಬುದನ್ನೂ ವ್ಯಕ್ತಮಾಡಿದ್ದಾಳೆ.



# ಅಕ್ಕನ ಐಕ್ಯ.

---

**ಕೇ**ವಲ ವಾಗದ್ವೈತಿಗೆ ಕರ್ಮವಾಸನೆಯು ಹಲವು ಬಗೆಯಾಗಿ ಬೆಂಗೋಲನೆತ್ತಿ ಕಾಡುವುದು. ಆತನು ಆತ್ಮನನ್ನು ಅರಿತಿದ್ದರೂ ಒಡಲ ಕಳವಳಕ್ಕೊಳಗಾಗಿ ಭೋಗದಲ್ಲಿ ಮನವೆರಗಿ ಪಶುತುಲ್ಯನಾಗಿ ವರ್ತಿಸುವನು. ಆತನಿಗೆ ಆತ್ಮವಿಷಯದಲ್ಲಿ ಬರೀ ಮಾತು ಮಾತ್ರ. ಕರ್ಮದಲ್ಲಿ ಅತಿ ಪ್ರೀತಿ ಹುದುಗಿಕೊಂಡಿರುವುದು. ಸಮರಸ ವೇದ್ಯವಾಗದೆ ಭೋಗಿಯಾಗಿ ಭವರೋಗಿಯಾಗಿ ಅಲೆಯುವನು. ಇದು ಕರ್ಮದ ಕೈಯಾಟ ಅಥವಾ ಮಾಯದ ಜಂಝಾಟ.

> "ಎನ್ನ ಮಾಯದ ಮದವ ಮುರಿಯಯ್ಯ! ಎನ್ನ ಕಾಯದ ಕತ್ತಲೆಯ ಕಳೆಯಯ್ಯ! ಎನ್ನ ಜೀವದ ಜಂಜಡವ ಮಾಣಿಸಯ್ಯ! ಎನ್ನ ದೇವ ಚೆನ್ನಮಲ್ಲಿಕಾರ್ಜುನ ದೇವಯ್ಯ ಎನ್ನ ಸುತ್ತಿದ ಪ್ರಪಂಚವ ಬಿಡಿಸು ನಿಮ್ಮ ಧರ್ಮ."

ಎಂಬುದಾಗಿ ಅನನ್ಯಗತಿಕವಾದ ಭಕ್ತಿಯಿಂದ ಶಿವನಲ್ಲಿ ಮೊರೆಯಿಟ್ಟು ಮಾಯದ ಮದವನ್ನು ಮುರಿದು ಭೋಗಲಾಲಸೆಯನ್ನು ತೊಲಗಿಸಿ ನಿಶ್ಚಲನಾಗಿ ನಿಜಾನಂದದಲ್ಲಿರುವುದು ಜೀವನ್ಮುಕ್ತನ ಆದ್ಯಕರ್ತವ್ಯ. ಹೀಗಾದವನಿಗೆ ಯಾವುದರ ಲೇಪವಿಲ್ಲ; ಬಾಧೆಯಿಲ್ಲ. ಈತನು ಎಲ್ಲ ವಸ್ತುವನ್ನು ಭೋಗಿಸಿದರೂ ಬೆಂಕಿಯಂತೆ ತೇಜಸ್ವಿಯಾಗಿಯೂ, ಯಾವ ಪದಾರ್ಥವನ್ನು ಸೋಂಕಿದರೂ ಪವನದಂತೆ ಪವಿತ್ರನಾಗಿಯೂ, ಪದ್ಮಪತ್ರದಂತೆ ನಿರ್ಲೇಪನಾಗಿಯೂ, ಮೋಡ ಮುಸುಗಿದರೂ ಮಲಿನವಾಗದ ಆಗಸದಂತೆ ನಿರ್ಮಲನಾಗಿಯೂ ಇರುವನು. ತರು-ನೀರುಗಳಲ್ಲಿ ಉರಿಯಿದ್ದರೂ ಇಲ್ಲದಂತಿರುವಂತೆ ಈತನು ಸಂಸಾರದಲ್ಲಿ ಇದ್ದೂ ಇಲ್ಲದಂತಿರುವನು. ಕ್ರಿಯಾ ಜ್ಞಾನರೂಪ ತರಂಗಗಳು ಬಂದು ಅಪ್ಪಳಿಸಲು

ಮಾಯಾಮಳಲಿನ ಸೇತು ಒಡೆದು ಲಿಂಗಾಂಗ ಜಲಗಳೆರಡೂ ಸೇರಿ ಬೇರಿಲ್ಲದಂತಾಗುವವು. ಆಗ ತಾನೇ ತಾನಾಗಿ ಆ ಅವಿರಳಾನಂದದಿಂದ ತೆಕ್ಕನೆ ತೀವಿ ತನ್ಮಯನಾಗುವನು. ಅಕ್ಕನ ಐಕ್ಯವು ಈ ತೆರನಾದುದು. ಅವಳು ಮಲ್ಲಿಕಾರ್ಜುನನ ಮನಸೇರಿ ಎಲ್ಲ ಆಶೆಗಳನ್ನೂ ಅಳಿದು ನಿರಾಶಳಾಗಿ ವರ್ತಿಸಿದ್ದಾಳೆ. ಅವಳಿಗೆ ಮಾಡಲು ಮತ್ತೊಂದು ಕ್ರಿಯೆಯಿಲ್ಲ. ಮಾತಾಡಲು ಬೇರೆ ನುಡಿಯಿಲ್ಲ. ಭಾವಿಸಲು ಮತ್ತೊಂದು ಭಾವ್ಯವಸ್ತುವಿಲ್ಲ.

> "ಕ್ರಿಯೆಯುಳ್ಳೊಡಂತೊಂದಾಸೆ. ಸದ್ಭಕ್ತರ ನುಡಿಗಡಣವುಳ್ಳೊಡಂತೊಂದಾಸೆ. ಶ್ರೀಗಿರಿಯ ಮನೇರಿ ನಿಮ್ಮ ಬೆರಸಿದರೆ ಎನ್ನಾಸೆಗೆ ಕಡೆಯೇ ಅಯ್ಯಾ? ಆವ ಆಶೆಯೂ ಇಲ್ಲದೆ ನಿಮ್ಮ ನಂಬಿರ್ದೆನಯ್ಯ ಚನ್ನಮಲ್ಲಿಕಾರ್ಜುನಾ."

ಎನ್ನುವ ಸ್ಥಿತಿಗೆ ಬಂದಿದ್ದಾಳೆ. ಅವಳ ನಂಬಿಗೆಯು ಅಷ್ಟೊಂದು ಅಚಲವಾಗಿದೆ. ಅಕ್ಕನು ಕೆಂಡದಲ್ಲಿ ಬಿಚ್ಚಿಟ್ಟ ಕೋಲಿನಂತಾಗಿದ್ದಾಳೆ.

> "ಅಂಗಸಂಗದಲ್ಲಿ ಲಿಂಗಸಂಗಿಯಾದೆ. ಲಿಂಗಸಂಗದಲ್ಲಿ ಅಂಗಸಂಗಿಯಾದೆ. ಉಭಯಸಂಗವನು ಅರಿಯದೆ ಪರಿಣಾಮಿಯಾದೆನು. ನುಡಿಯಗಡಣವ ಮರೆದು ತೆರಹಿಲ್ಲದಿದ್ದರೇನು? ಎನ್ನ ದೇವ ಚನ್ನಮಲ್ಲಿಕಾರ್ಜುನ ದೇವರ ಬೆರಸಿದ ಬಳಿಕ ಎನ್ನ ನಾನು ಏನೆಂದು ಅರಿಯೆನಯ್ಯ."

> "ಲಿಂಗವೆನ್ನೆ, ಲಿಂಗೈಕ್ಯವೆನ್ನೆ. ಸಂಗವೆನ್ನೆ, ಸಮರಸವೆನ್ನೆ. ಆಯಿತೆನ್ನೆ, ಆಗದೆನ್ನೆ. ನೀನೆನ್ನೆ, ನಾನೆನ್ನೆ. ಚನ್ನಮಲ್ಲಿಕಾರ್ಜುನನಲ್ಲಿ ಲಿಂಗೈಕ್ಯವಾದ ಬಳಿಕ ಏನೂ ಅನ್ನೆ."

ಎಂಬಂತೆ ಮಹಾದೇವಿಯು ಮಲ್ಲಿಕಾರ್ಜುನನಲ್ಲಿ ದೀಪ ದೀಪ್ತಿಯಂತೆ, ಚಿನ್ನ ಬಣ್ಣದಂತೆ, ಪುಷ್ಪಪರಿಮಳದಂತೆ ಬೆರೆದು ಬೈಲಾಗಿದ್ದಾಳೆ.



# ಅಕ್ಕನ ಭಕ್ತಿ.

---

ಅಕ್ಕನ ಬಾಳನ್ನು ಕಂಡುದಾಯಿತು. ಇನ್ನು ಅದನ್ನು ಸಂಪಾದಿಸಿದ ಅವಳ ಬಟ್ಟೆ ಎಂತಹದು ಎಂಬುದನ್ನು ಕಾಣದೆ ಬಿಡುವಂತಿಲ್ಲ. ಏಕೆಂದರೆ ಎಂದೆಂದಿಗೂ ಬಿಡದ ಬಾಳನ್ನು ಸಂಪಾದಿಸಿಕೊಟ್ಟ ಅವಳ ಆ ಬಟ್ಟೆಯನ್ನು ಕಾಣದೆ ಬಿಡುವುದು ಹೇಗೆ?

ಅಕ್ಕನು ಕೇವಲ ವಿರಸವಾದ ವೈರಾಗ್ಯವೊಂದರಲ್ಲಿಯೇ ಮುರಿದು ಹೋದ ವ್ಯಕ್ತಿಯಲ್ಲ. ಆ ವೈರಾಗ್ಯದ ಹೆಮ್ಮೆಯಿಂದ ಹಿರಿಕಿರಿಯರನ್ನು ಜರಿದು, ಪುಣ್ಯಾಗಣ್ಯರನ್ನು ಹಳಿದುಹೋದ ಕಲ್ಲೆದೆಯ ಜೀವವಲ್ಲ. ಅವಳು ವೀರ ವೈರಾಗ್ಯವಂತಳಾದರೂ ಅತ್ಯಂತ ಕೋಮಲ ಹೃದಯದವಳು; ಪ್ರೇಮಳ ಸ್ವಭಾವದವಳು. ಹೀನ-ದೀನರನ್ನು ಕಂಡು ಮರುಗುತ್ತಿದ್ದಳು. ಪುಣ್ಯಾಗಣ್ಯರನ್ನು ಕಂಡು ನಂಬುತ್ತಿದ್ದಳು; ಆದರಿಸುತ್ತಿದ್ದಳು. ಈ ಗುಣ ವಿಶೇಷಕ್ಕೇನೆ ಭಕ್ತಿಯೆಂದು ನಮ್ಮ ಪೂರ್ವಜರು ಕರೆದರು. ಆಳವಾದ ಗಮ್ಯಗುರಿಯನ್ನು ದೊರಕಿಸಲು ಇದು ಶ್ರೇಷ್ಠವಾದ ಮಾರ್ಗವಾದರೂ ಸುಲಭ ಸಾಧ್ಯವಾದ ಮಾರ್ಗವಲ್ಲ. ನೋಡುವವರಿಗೆ ಸುಲಭವಿದ್ದಂತೆ ಕಂಡರೂ ಸರ್ವಸಾಮಾನ್ಯರ ಸೊತ್ತಲ್ಲ. ಯಾರಾದರೂ ಎಲ್ಲಾದರೂ ಪ್ರೇಮವನ್ನಿಡಬಹುದು. ಏಕೆಂದರೆ ಅದನ್ನು ಕೊಂಡು ತರಬೇಕಾಗಿಲ್ಲ. ಕೇಳಿ ಬಳಸಬೇಕಿಲ್ಲ. ಆದರೆ ಉಪಯೋಗಿಸುವದರಲ್ಲಿಯೇ ಒಂದು ಜಾಣತನವಿದೆ. ಅದರ ಜೊತೆಯಾಗಿ ಬರುವ ಆಶೆ, ಅಭಿಮಾನ ಮೊದಲಾದ ಗುಣಗಳು ಅಳಿಯಬೇಕು. ಸರ್ವ ಲಿಂಗಾರ್ಪಣ ಬುದ್ಧಿಯು ಬಲಿಯಬೇಕು. ಇವುಗಳಿಂದ ಕೂಡಿದ ಭಕ್ತಿಯೇ ಪರಿಪೂರ್ಣವಾದದು; ಪರಮ ಶಾಂತಿಗೆ ಕಾರಣವಾದುದು.

ಇಂತಹ ಭಕ್ತಿಯು ಅಕ್ಕನಲ್ಲಿಯೂ ಇದ್ದಿತು. ಅವಳು ಯಾವುದನ್ನೂ ಬಯಸಲಿಲ್ಲ; ಯಾವಾಗಲೂ ಹೆಮ್ಮೆಪಟ್ಟುಕೊಳ್ಳಲಿಲ್ಲ; ಯಾರನ್ನೂ ನಿಂದಿಸಲಿಲ್ಲ. ಈ ಗುಣಭರಿತವಾದ ಭಕ್ತಿಭಾವವು ಅಕ್ಕನಲ್ಲಿತ್ತೆಂಬುದು ಅವಳ ವಚನದಿಂದಲೇ ವ್ಯಕ್ತವಾಗುತ್ತದೆ. ನಿರಹಂಭಾವ ಭಕ್ತಿಗೆ—

> "ಆಯತ ಸ್ವಾಯತ ಅನುಭಾವವ ನಾನೆತ್ತ ಬಲ್ಲೆನಯ್ಯಾ! ಗುರು ಲಿಂಗ ಜಂಗಮಕ್ಕೆ ಅರ್ಥಪ್ರಾಣಾಭಿಮಾನವನಿತ್ತ ಭಕ್ತರ ಭೃತ್ಯರ ಭೃತ್ಯರಿಗಾಳಾಗಿಪ್ಪೆನಯ್ಯಾ! ಚನ್ನಮಲ್ಲಿಕಾರ್ಜುನಯ್ಯಾ ನಿಮ್ಮ ಶರಣರಲ್ಲದನ್ಯವ ತೋರದಿರಯ್ಯಾ."

> "ಬಸವಣ್ಣನ ಮನೆಯ ಮಗಳಾದ ಕಾರಣ ಭಕ್ತಿಪ್ರಸಾದವ ಕೊಟ್ಟನು. ಪ್ರಭುದೇವರ ತೊತ್ತಿನ ತೊತ್ತಿನ ಮರಿದೊತ್ತಿನ ಮಗಳಾದ ಕಾರಣ ಜ್ಞಾನಪ್ರಸಾದವ ಕೊಟ್ಟನು......"ಇತ್ಯಾದಿ.

ವೈರಾಗ್ಯವೇ ಅಂಗವಾಗಿಯುಳ್ಳ ಅಕ್ಕನಲ್ಲಿ ನಿಷ್ಕಾಮ ಭಕ್ತಿಯನ್ನು ಹುಡುಕಬೇಕೆ? ಅವಳ ಆ ನಿಷ್ಕಾಮ ಭಕ್ತಿಯ ಹಿರಿಹೊನಲು ಈ ವಚನದಲ್ಲಿ ತುಂಬಿ ಹೊರಸೂಸಿದೆ.

> "ಅಯ್ಯಾ ನೀ ಕೇಳಿದರೆ ಕೇಳು, ಕೇಳದಿರ್ದಡೆ ಮಾಣು. ನಾ ನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯಾ! ಅಯ್ಯಾ ನೀ ಒಲಿದರೆ ಒಲಿ, ಒಲಿಯದಿರ್ದಡೆ ಮಾಣು. ನಾನಿನ್ನ ಪೂಜಿಸಿದಲ್ಲದೆ ಸೈರಿಸಲಾರೆನಯ್ಯಾ! ಅಯ್ಯಾ ನೀ ಮಚ್ಚಿದರೆ ಮಚ್ಚು, ಮಚ್ಚದಿರ್ದಡೆ ಮಾಣು. ನಾನಿನ್ನನಪ್ಪಿದಲ್ಲದೆ ಸೈರಿಸಲಾರೆನಯ್ಯಾ! ಅಯ್ಯಾ ನೀ ನೋಡಿದಡೆ ನೋಡು, ನೋಡದಿರ್ದಡೆ ಮಾಣು. ನಾನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾರೆನಯ್ಯಾ! ಚನ್ನಮಲ್ಲಿಕಾರ್ಜುನಯ್ಯಾ ನಾನಿಮ್ಮ ಪೂಜಿಸಿ ಹರುಷದೊಳೋಲಾಡುವೆನಯ್ಯಾ!"

ಅಕ್ಕನ ನಿಷ್ಕಾಮ ಭಕ್ತಿಗೆ ಇದೊಂದೇ ವಚನ ಸಾಕು.

'ವನವೆಲ್ಲ ನೀವೆ, ವನದೊಳಗಣ ದೇವ ತರುವೆಲ್ಲ ನೀವೆ' ಎಂದು ಎಲ್ಲವನ್ನೂ ಚನ್ನಮಲ್ಲಿಕಾರ್ಜುನನೆಂದು ಭಾವಿಸಿದ ಅಕ್ಕನಲ್ಲಿ ಅಹಿಂಸಾ ಭಕ್ತಿಗೆ ಮೇರೆಯುಂಟೆ? ಧರ್ಮದ ಹೆಸರಿನಲ್ಲಿ ಹಿಂಸೆಯನ್ನು ಮಾಡ ಹೇಳುವ ಶಾಸ್ತ್ರಗಳನ್ನೂ ಸಹ ದೂರ ತೂರಿಬಿಟ್ಟ ಅವಳಲ್ಲಿ ಅಹಿಂಸಾತ್ಮಕ ಭಕ್ತಿಗೆ ಕೊರತೆಯೆ? ಆದರೂ ಕ್ರಮಕ್ಕನುಗುಣವಾಗಿ ಇದಕ್ಕೊಂದು ವಚನವನ್ನು ಉದಹರಿಸಲೇಬೇಕು.

"ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ ಹಲವು ಪ್ರಾಣಿಯ ಕೊಂದು ನಲಿನಲಿದಾಡುವ. ತನ್ನ ಮನೆಯಲೊಂದ ಶಿಶು ಸತ್ತಡೆ ಅದಕ್ಕೆ ಮರುಗುವಂತೆ ಅವಕೇಕೆ ಮರುಗನು?......' ಜಾಲಗಾರನ ದುಃಖ ಜಗಕ್ಕೆಲ್ಲ ನಗೆಗೆಡೆ. ಇದು ಕಾರಣ ಚನ್ನಮಲ್ಲಿಕಾರ್ಜುನಯ್ಯನ ಭಕ್ತನಾಗಿರ್ದು ಜೀವಹಿಂಸೆಯ ಮಾಡುವ ಮಾದಿಗರನೇನೆಂಬೆನಯ್ಯಾ?"

ಎಂಬೀ ವಚನದಲ್ಲಿ ತನ್ನ ಅಹಿಂಸಾತ್ಮಕ ಭಕ್ತಿಯ ಪ್ರೇಮವನ್ನು ಸೂರೆ ಮಾಡಿದ್ದಾಳೆ. ಭಕ್ತರಾಗಿ ಜೀವಹಿಂಸೆಯ ಮಾಡುವದೆಂದರೆ ಅವಳಿಗೆ ಸಹಿಸಲು ಬಾರದ ಕೋಪವು ಬರುತ್ತಿದ್ದಿತೆಂಬುದು ಇದರಿಂದ ವ್ಯಕ್ತವಾಗುತ್ತದೆ. ಹಿಂಸಾತ್ಮಕ ಭಕ್ತಿಯು ನಿಜವಾದ ಭಕ್ತಿಯಲ್ಲ. ಅದು ಉದರಂಭರಣದ ಯುಕ್ತಿ. ಅದಕ್ಕಾಗಿ ಅಕ್ಕನು ಅಷ್ಟೊಂದು ಕೆರಳಿ ಅವರನ್ನು 'ಮಾದಿಗ' ರೆಂದು ಬೈದುಬಿಟ್ಟಿದ್ದಾಳೆ.

"ನಚ್ಚುಗೆ ಮನ ನಿಮ್ಮಲ್ಲಿ, ಮಚ್ಚುಗೆ ಮನ ನಿಮ್ಮಲ್ಲಿ. ಸಲುಗುಗೆ ಮನ ನಿಮ್ಮಲ್ಲಿ, ಸೋಲುಗೆ ಮನ ನಿಮ್ಮಲ್ಲಿ. ಅಳಲುಗೆ ಮನ ನಿಮ್ಮಲ್ಲಿ, ಬಳಲುಗೆ ಮನ ನಿಮ್ಮಲ್ಲಿ, ಕರಗುಗೆ ಮನ ನಿಮ್ಮಲ್ಲಿ, ಕೊರಗುಗೆ ಮನ ನಿಮ್ಮಲ್ಲಿ. ಎನ್ನ ಪಂಚೇಂದ್ರಿಯಂಗಳು ಕಬ್ಬುನ ಉಂಡ ನೀರಿನಂತೆ. ನಿಮ್ಮಲ್ಲಿ ಬೆರಸುಗೆ ಚನ್ನಮಲ್ಲಿಕಾರ್ಜುನಾ."

ಎಂಬುದಾಗಿ ಇದು ಅವಳ ಸರ್ವಾರ್ಪಣಭರಿತವಾದ ಅನನ್ಯ ಭಕ್ತಿಯ ಹೆಗ್ಗುರುತಾಗಿದೆ. ಒಟ್ಟಿನಲ್ಲಿ ಭಕ್ತಿಯು ನಿರಾಶೆ, ನಿರಭಿಮಾನ, ಜೀವ

ಕರುಣೆ, ಅನನ್ಯಭಾವ ಇವುಗಳಿಂದ ಕೂಡಿದರೇನೆ ಸಂಪೂರ್ಣವಾಗುವುದು; ಸವಿಯಾಗುವುದು. ಅಂತಹ ಭಕ್ತಿಯಿಂದ ಭರಿತಳಾಗಿದ್ದಳು ಮಹಾದೇವಿಯಕ್ಕನು. ಆದುದರಿಂದಲೇ ಅವಳನ್ನು ಹರಿಹರನು 'ಭಕ್ತಿ ಭರಿತೆ'ಯೆಂದೂ, ಚಾಮರಸನು 'ಭಕ್ತಿಯ ಬಳ್ಳಿ' ಯೆಂದೂ. ಸಿದ್ಧವೀರಣ್ಣೊಡೆಯನು 'ಭಕ್ತಿಯ ಭಾಗ್ಯ'ವೆಂದೂ ಬಣ್ಣಿಸಿದರು.



# ಅಕ್ಕನ ಜ್ಞಾನ.



ಅಕ್ಕನ ಜ್ಞಾನವು ಅಗಾಧವಾದುದು; ಅದ್ವಿತೀಯವಾದುದು. ಅವಳ ಜ್ಞಾನವು ಯಾವ ದಾರ್ಶನಿಕರಿಗಿಂತಲೂ ಕಡಿಮೆಯದಲ್ಲ. ಯಾವ ದರ್ಶನಕ್ಕೂ ಮೊರೆಹೋಗುವಂತಹದಲ್ಲ. ಯಾವ ವಿಚಾರವನ್ನಾದರೂ ಸ್ವತಂತ್ರವಾಗಿಯೇ ಪ್ರತಿಪಾದಿಸುವ ಕೆಚ್ಚೆದೆಯವಳು. ಅವಳ ವಚನ ಚಿಕ್ಕದಾದರೂ ಮಿಕ್ಕ ಯಾವ ಸಂಸ್ಕೃತದ ದೊಡ್ಡ ಹೊತ್ತಿಗೆಗಳು ಅದರ ಮುಂದೆ ನಿಲ್ಲಲಾರವು. ಅವಳ ಮಾತುಗಳು ತುಸು. ಅವುಗಳ ಬೆಳಗು ದೊಡ್ಡದು. ಅವಳ ಆ ಜ್ಞಾನದ ಹಿರಿಮೆಯು ಬರೀ ಹೇಳಿಕೆ-ಹೊಗಳಿಕೆಗಳಿಂದ ತೀರದು. ಅದನ್ನು ಕೊಂಚ ದಾರ್ಶನಿಕರೊಡನೆ ತೂಗಿನೋಡಬೇಕು.

೧. ದ್ವೈತಿಯು ತಾನು ದೇವರಿಗೆ ಯಾವಾಗಲೂ ಭಿನ್ನನೆಂದೇ ಭಾವಿಸಿ ಕೊನೆಗೂ ತಾನು ಸೇವಕನಾಗಿಯೇ ಉಳಿಯುವವನು ಎಂದು ತಿಳಿಯುವನು. "ತಪಸಾಕಲ್ಮಷಂ ಹಂತಿ'' ಇತ್ಯಾದಿ ಶೃತಿಯ ಮಾತು

ಗಳನ್ನು ಅವಲಂಬಿಸಿ ತಾನು ಕರ್ಮಮಾತ್ರವನ್ನು ಮಾಡಿ ಪಾಪರಹಿತನಾಗಿ ಪುಣ್ಯಭಾಗಿಯಾಗಿ ತತ್ಫಲವನ್ನು ಉಣ್ಣುತ್ತಿರುವುದೇ ಧ್ಯೇಯವೆಂದು ಭಾವಿಸಿದನು. ಬರಬರುತ್ತ ಅವರ ಕರ್ಮದಲ್ಲಿರುವ ಒಂದು ವಿಧವಾದ ಸಂಕುಚಿತ ಕಲ್ಪನೆಯೂ ಸಹ ಹೋಗಿ ಬರಿ ಸಾಂಪ್ರದಾಯಕ್ಕೆ ಮಾತ್ರ ಬಂದುನಿಂತಿತು. ಆಮೇಲೆ ಕೇವಲ ಬಾಹ್ಯಶೌಚಕ್ಕೇನೆ ಒಂದು ಪ್ರಾಧಾನ್ಯವು ಬಂದು ಪುನಃ ಪುನಃ ನೀರಲ್ಲಿ ಮಿಂದು ಮಿಂದು ಅಂತಃಶುದ್ಧಿಯಿಲ್ಲದೆ ಅನನ್ಯಭಕ್ತಿಯಿಲ್ಲದೆ ತೊಳಲಹತ್ತಿದರು. ಅವರನ್ನು ಕಂಡು ಅಕ್ಕನು —

> "ಶೀಲ ಶೀಲವೆಂತೆಂಬಿರಯ್ಯಾ, ಶೀಲದ ನೆಲೆಯ ಬಲ್ಲರೆ ಹೇಳಿರೋ, ಅರಿಯದಿದ್ದರೆ ಕೇಳಿರೊ? ಕಾಮ ಒಂದು ಭವಿ, ಕ್ರೋಧ ,ಎರಡನೆ ಭವಿ, ಲೋಭ ಮೂರನೆ ಭವಿ, ಮೋಹ ನಾಲ್ಕನೆ ಭವಿ, ಮದ ಐದನೆ ಭವಿ, ಮತ್ಸರ ಆರನೆ ಭವಿ, ಆಮಿಷ ಏಳನೆ ಭವಿ. ಇಂತೀ ಏಳು ಭವಿಗಳ ತಮ್ಮೊಳಗಿಟ್ಟುಕೊಂಡು ಲಿಂಗವಿಲ್ಲದವರ ಭವಿ ಭವಿ ಎಂಬರು......"

ಹೀಗೆ ನೀರಕಂಡಲ್ಲಿ ಮುಳುಗಿ ಮರನಕಂಡಲ್ಲಿ ಸುತ್ತಿದರೆ ಆಗದು. ಅಂತರಂಗದ ಅವಗುಣಗಳು ಅಳಿಯಬೇಕು. ಬಹಿರಂಗವು ಶುದ್ಧವಾಗಬೇಕು. ಹೀಗಾಗದೆ ನಾವೇನನ್ನರ್ಪಿಸಿದರೂ ಅವನ್ನು ಶಿವನು ಕೈಕೊಳ್ಳನು.

> "ತನು ಕರಗದವರಲ್ಲಿ ಮಜ್ಜನವನೊಲ್ಲೆಯಯ್ಯಾ ನೀನು. ಮನ ಕರಗದವರಲ್ಲಿ ಪುಷ್ಪವನೊಲ್ಲೆಯಯ್ಯಾ ನೀನು. ಹದುಳಿಗರಲ್ಲದವರಲ್ಲವರಲ್ಲಿ ಗಂಧಾಕ್ಷತೆಯನೊಲ್ಲೆಯಯ್ಯಾ ನೀನು. ಅರಿವು ಕಣ್ದೆರೆಯದವರಲ್ಲಿ ಆರತಿಯನೊಲ್ಲೆಯಯ್ಯಾ ನೀನು. ಭಾವಶುದ್ಧವಿಲ್ಲದವರಲ್ಲಿ ಧೂಪವನೊಲ್ಲೆಯಯ್ಯಾ ನೀನು. ತ್ರಿಕರಣ ಶುದ್ಧವಿಲ್ಲದವರಲ್ಲಿ ತಾಂಬೂಲವನೊಲ್ಲೆಯಯ್ಯಾ ನೀನು. ಹೃದಯ ಕಮಲ ಶುದ್ಧವಿಲ್ಲದವರಲ್ಲಿ ಇರಲೊಲ್ಲೆಯಯ್ಯಾ ನೀನು. ಎನ್ನಲ್ಲಿ ಏನುಂಟೆಂದು ಕರಸ್ಥಲವನಿಂಬುಗೊಂಡೆ ಹೇಳಾ ಚನ್ನಮಲ್ಲಿಕಾರ್ಜುನಯ್ಯಾ!"

ಆದು ಕಾರಣ ಕೇವಲ ಕರ್ಮಪರರಾಗದೆ ತ್ರಿಕರಣ ಶುದ್ಧಿಯನ್ನು ಪಡೆಯಿರಿ. ತ್ರಿಕಾಲಾಬಾಧಿಕ ಸುಖವನ್ನು ಸವಿಯಿರಿ ಎಂದು ಉಪದೇಶಿಸಿದ್ದಾಳೆ.

೨. ಅದು-ಇದು ಎಂಬ ಭಿನ್ನ ಭಾವವಳಿದು 'ಸೋಽಹಂ' ಅವನೇ ನಾನು ಎಂದು ತಿಳಿಯುವುದೇ ಜ್ಞಾನ ಅಥವಾ ಮೋಕ್ಷವೆಂದು ಅದ್ವೈತಿಗಳು 'ತತ್ವಮಸ್ಯಾದಿ' ಮಹಾವಾಕ್ಯಗಳಿಂದ ಪ್ರತಿಪಾದಿಸುತ್ತಾರೆ. ಆದರೆ ಅಕ್ಕನು –

> "......ನಾಹಂ ಕೋಽಹಂ ಭ್ರಮೆ, ಶಿವೋಽಹಂ ಭ್ರಮೆ, ಮಾಯಾ ಭ್ರಮೆ ಮೊದಲಾದ ಮೂವತ್ತೆರಡು ಶಾಖಾಭ್ರಮಿತರಾಗಿ ತೊಳಲುವ ವೇಷಧಾರಿಗಳ ಕಂಡು...... ಎನ್ನ ಮನನಾಚಿ ನಿಮ್ಮಡಿಗೆ ಅಭಿಮುಖವಾಯಿತ್ತಯ್ಯ ಚನ್ನಮಲ್ಲಿಕಾರ್ಜುನಾ."

ಎಂಬೀವಚನದಿಂದ 'ಶಿವೋಽಹಂ(ಸೋಽಹಂ)' ಎಂಬುದೂ ಭ್ರಮೆಯೆಂದು ಹೇಳುತ್ತಾಳೆ. 'ಸರ್ವಂಖಲ್ವಿದಂ ಬ್ರಹ್ಮ' ಎಂಬ ವಿಶಾಲವಾದ ಭಾವನೆಯಲ್ಲಿ ಎಲ್ಲವನ್ನೂ ನೇತಿಗಳೆದು ಕೇವಲ 'ಸೋಽಹಂ' ಎಂದು ಹೇಳುವುದು ಭ್ರಮೆಯಲ್ಲದೆ ಮತ್ತೇನು? ವೀರಶೈವರು ಯಾವುದನ್ನೂ ನೇತಿಗಳೆಯುವದಿಲ್ಲ. ಜಗತ್ತು ಸುಳ್ಳೆನ್ನುವದಿಲ್ಲ. ಶರೀರಕರಣಾದಿಗಳು ಜಡವೆಂದು ಭಾವಿಸುವದಿಲ್ಲ. ಎಲ್ಲವೂ ಲಿಂಗಮಯ. ಎಲ್ಲವೂ ಅವಿನಾಶ. (ಒಮ್ಮೆ ವ್ಯಕ್ತವಾದುದು ಇನ್ನೊಮ್ಮೆ ಅವ್ಯಕ್ತವಾಗಿರಬಹುದು ಅಷ್ಟೆ.) ಆದುದರಿಂದ 'ಸೋಽಹಂ ಎಂದೆನಿಸದೆ ದಾಸೋಹಂ ಎಂದೆನಿಸಯ್ಯ' ಎಂಬ ಸಿದ್ಧಾಂತಕ್ಕೆ ಬಂದವರು ನಮ್ಮ ಶರಣರು. ಅದುಅಲ್ಲ, ಇದುಅಲ್ಲ, ಅದುಸುಳ್ಳು, ಇದುಸುಳ್ಳು ಎಂದು ಯಾವುದನ್ನೂ ನೇತಿಗಳೆಯದೆ 'ವನವೆಲ್ಲ ನೀವೆ. ವನದೊಳಗಣದೇವತರುವೆಲ್ಲ ನೀವೆ. ತರುವಿನೊಳಗಾಡುವ ಖಗಮೃಗವೆಲ್ಲ ನೀವೆ. ಚನ್ನಮಲ್ಲಿಕಾರ್ಜುನಾ! ಸರ್ವಭರಿತನಾಗಿ ಎನಗೆ ಮುಖದೋರಾ' ಎಂಬ ವಿಶಾಲವಾದ ವ್ಯಾಪಕವಾದ ಮಟ್ಟಕ್ಕೆ ಬಂದವಳು ಅಕ್ಕನು.

'ಜ್ಞಾನಾದೇವತು ಕೈವಲ್ಯಂ' ಮೋಕ್ಷಕ್ಕೆ ಜ್ಞಾನವೊಂದೇ ಸಾಧನ ವೆಂದು ಅದ್ವೈತಿಗಳ ಸಿದ್ಧಾಂತ. ವೀರಶೈವರು ಇದನ್ನು ಒಪ್ಪುವದಿಲ್ಲ. ಇವರು ಜ್ಞಾನಕ್ರಿಯೆಗಳೆರಡನ್ನೂ ಪ್ರತಿಪಾದಿಸುವರು. ಕ್ರಿಯೆಯಿಲ್ಲದ ಜ್ಞಾನ ಚೈತನ್ಯವಿಲ್ಲದ ದೇಹವಿದ್ದಂತೆ. ಈ ವಿಚಾರವನ್ನು ಅಕ್ಕನು ಎಷ್ಟೊಂದು ಸುಗಮವಾಗಿ ಸರಸವಾಗಿ ಪ್ರತಿಪಾದಿಸುತ್ತಾಳೆ. ಪರಿಕಿಸಿರಿ!

"ಅರಿವು ಸಾಧ್ಯವಾಯಿತ್ತೆಂದು ಗುರು ಲಿಂಗ ಜಂಗಮವ ಬಿಡಬಹುದೆ? ಸಂದು ಸಂಶಯವಳಿದು ಅಖಂಡ ಜ್ಞಾನವಾಯಿತ್ತೆಂದು ಪರಧನ ಪರಸ್ತ್ರೀಗಳುಪಬಹುದೆ? "ಯತ್ರಜೀವಸ್ತತ್ರ ಶಿವಃ" ಎಂಬ ಅಭಿನ್ನ ಜ್ಞಾನವಾಯಿತ್ತೆಂದು ಶುನಕ, ಸೂಕರ, ಕುಕ್ಕುಟ, ಮಾರ್ಜಾಲಗಳ ಕೂಡಿ ಭುಂಜಿಸಬಹುದೆ? ಭಾವದಲ್ಲಿ ತನ್ನ ನಿಜದ ನೆಲೆಯನರಿವುತ್ತಿಹುದು. ಸುಜ್ಞಾನ, ಸತ್ಕ್ರಿಯಾ, ಸುನೀತಿ, ಸುಮಾರ್ಗದಲ್ಲಿ ವರ್ತಿಸುವುದು. ಹೀಗಲ್ಲದೆ ಜ್ಞಾನವಾಯಿತ್ತೆಂದು ತನ್ನ ಮನಕ್ಕೆ ಬಂದ ಹಾಗೆ ಮೀರಿ ನುಡಿದು ನಡೆದನಾದೊಡೆ ಶ್ವಾನಗರ್ಭದಲ್ಲಿ ಹುಟ್ಟಿಸದೆ ಬಿಡುವನೇ ಚನ್ನಮಲ್ಲಿಕಾರ್ಜುನಯ್ಯನು ?"

ಎಂತಹ ಜ್ಞಾನಿಯಾದರೂ ಕ್ರಿಯೆಬೇಕು. ಎಂದು ಅಕ್ಕನ ಹೇಳಿಕೆ. ಇದುವೇ ಸತ್ಯವಾದುದು.

೧ "ಈಳೆ, ನಿಂಬೆ, ಮಾವು, ಮಾದಲಕ್ಕೆ ಹುಳಿನೀರನೆರೆದವರಾರಯ್ಯಾ! ಕಬ್ಬು, ಬಾಳೆ, ಹಲಸು, ನಾರಿವಾಳಕ್ಕೆ ಸಿಹಿನೀರನೆರೆದವರಾರಯ್ಯಾ! ಕಳವೆ, ಶಾಲಿಗೆ ಓಗರದ ಉದಕವನೆರೆದವರಾರಯ್ಯಾ! ಮರುಗ, ಮಲ್ಲಿಗೆ, ಪಚ್ಚೆಗೆ ಪರಿಮಳದುದಕವನೆರೆದವರಾರಯ್ಯಾ! ಇಂತೀ ಜಲವು ಒಂದೆ, ನೆಲವು ಒಂದೆ, ಆಕಾಶವು ಒಂದೆ. ಒಂದೇ ಜಲವು ಹಲವು ದ್ರವ್ಯಂಗಳ ಕೂಡಿ ತನ್ನ ಪರಿ ಬೇರಾದ ಹಾಗೆ, ಎನ್ನದೇವ ಚನ್ನಮಲ್ಲಿಕಾರ್ಜುನಯ್ಯನು ಹಲವು ಜಗಂಗಳ ಕೂಡಿ ಕೊಂಡಿರ್ದರೇನು? ತನ್ನ ಪರಿ ಬೇರೆ."

ಎಂಬ ಈ ವಚನವನ್ನು ಓದಿ ಶುಷ್ಕ ತಾರ್ಕಿಕನು ಅಕ್ಕನ ಈ ಶುದ್ಧ ಸತ್ಯ ಸತ್ವಯುಕ್ತವಾದ ತರ್ಕಕ್ಕೆ (ವಿಚಾರಕ್ಕೆ) ಮೆಚ್ಚಿ ಬಾಯ್ಮುಚ್ಚಲೇಬೇಕು.

೪. ಅಕ್ಕನು ವಿರತಿಸಂಪನ್ನಳಾದರೂ ಯೋಗದಲ್ಲಿ ನುರಿತು ಅರಿತ ಮಹಾಯೋಗಿಣಿ. ಅವಳು ಹಠಯೋಗಿಣಿಯಲ್ಲ; ಪರಾತ್ಪರ ಶಿವಯೋಗಿಣಿಯು. ಅವಳು ತನುವನ್ನು ತೊಳಲಿಸುವ ಅಷ್ಟಾಂಗ ಯೋಗವನ್ನು ಮಾಡಲಿಲ್ಲ. ಇಷ್ಟಲಿಂಗ ಯೋಗವನ್ನು ಬಿಡಲಿಲ್ಲ. ಪ್ರಾಣಾಯಾಮವನ್ನು ಆದರಿಸಲಿಲ್ಲ. ಪ್ರಾಣಲಿಂಗಾರ್ಚನೆಯನ್ನು ಪರಿಹರಿಸಲಿಲ್ಲ. ಆ ಶಿವಯೋಗಾನಂದಸಾಗರದ ಮುಂದೆ ಈ ಹಠ ಯೋಗಸುಖವು ಒಂದು ಮಂಜುಕಣದಂತೆ ಅವಳಿಗೆ ಪರಿಣಮಿಸಿತ್ತು. ಆದುದರಿಂದಲೇ ಯೋಗಾಂಗತ್ರಿವಿಧಿಯೆಂಬ ಒಂದು ಸ್ವತಂತ್ರ ಗ್ರಂಥ ವನ್ನೇ ಬರೆದಳು. ಅದರಲ್ಲಿ ಕೆಲವನ್ನು ಇಲ್ಲಿ ಅವಗಾಹನೆಗೆ ತಂದು ಕೊಳ್ಳುವುದು ಒಳ್ಳೆಯದು.

ಯೋಗಿಯಾರು ?

ಆಕಾಶದೊಳಗಣ । ಜ್ಯೋತಿಯ ಪ್ರಭೆ ಬರದು ।
ಲೋಕಂಗಳೊಳಗೆ ಮುಸುಗಲು ಅದಕಂಡು ।
ಏಕಾಂಗಿಯಾದಡವನ ಯೋಗಿ ॥

ನಿಜವಾದ ಯೋಗವಾವುದು ?

ಅಷ್ಟವರ್ಣದ ಹಣ್ಣು । ಬಟ್ಟಬಯಲೊಳಗಿರಲು ।
ಅಷ್ಟಾಂಗ ಯೋಗಗಳ ಮಾಡಿ ಬಳಲುವರು ।
ದೃಷ್ಟಿಯಲಿ ಇರುವದನು ಮರೆದು ॥

ಅಕ್ಕನು ಆಚರಿಸಿದ ಯೋಗವೆಂತಹದು ?

ನಡೆವೆ ಲಿಂಗದ ಕೂಡೆ । ನುಡಿವೆ ಲಿಂಗದ ಒಡನೆ ।
ಎಡೆಬಿಡದೆ ಬರ್ಪ ವಿಷಯಭೋಗಗಳನ್ನು ।
ಕೊಡುವೆನ್ನ ಲಿಂಗ ಮುಖದಿಂದ ॥

ಕೋಟಿ ರವಿ ಶಶಿಗಳ್ಗೆ। ಮೀಟಾದ ಪ್ರಭೆ ಬಂದು।
ನಾಟತ್ತೆ ಎನ್ನ ಮನದೊಳಗದರಿಂದ।
ದಾಟಿದೆನೊ ಭವದ ಕೊಳಗಳ॥

ಅಕ್ಕನವರ ಯೋಗದ ಈ ಪರಿಪಕ್ವ ವಿಚಾರವನ್ನು ಕೇಳಿ ಯೋಗಾಚಾರ್ಯನಾದ ಪತಂಜಲಿಯೂ ಸಹ ತನ್ನ ಯೋಗದರ್ಶನಕ್ಕೆ ತಿಲಾಂಜಲಿಯನ್ನು ಬಿಟ್ಟು ಬದ್ಧಾಂಜಲಿಯಾಗಿ ನಿಲ್ಲಬೇಕು.

ಹೀಗೆ ದಾರ್ಶನಿಕರೊಡನೆ ಯಥಾಮತಿಯಾಗಿ ಅಕ್ಕನ ಜ್ಞಾನವನ್ನು ತೂಗಿ ನೋಡಿದ್ದಾಯಿತು. ಇನ್ನು ದರ್ಶನಗಳೊಡನೆ ವಿಚಾರಿಸುವ. "ಯತೋವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ ಯತ್ಪ್ರಯಂತ್ಯಭಿಸಂವಿಶಂತಿ ತದ್ವಿಜಿಜ್ಞಾಸಸ್ವ ತದ್ಬ್ರಹ್ಮ'' ಎಂದು ಯಾವುದೊಂದು ಲಕ್ಷಿಸುವ ಕುರುಹಿಲ್ಲದೆ ನಿರಾಧಾರವಾಗಿ ಬ್ರಹ್ಮನ ಕುರುಹನ್ನು ಹೇಳುವ ಶೃತಿಯೆತ್ತ ?

"ನೆಲದ ಮರೆಯ ನಿಧಾನದಂತೆ, ಫಲದ ಮರೆಯ ರುಚಿಯಂತೆ,
ತಿಲದ ಮರೆಯ ತೈಲದಂತೆ, ಭಾವದ ಮರೆಯ ಬ್ರಹ್ಮವಾಗಿಪ್ಪ..."

ಎಂಬುದಾಗಿ ಆತನಿದ್ದ ಠಾವನ್ನು ಕಂಡು ಗುರ್ತಿಸಿ ಹೇಳಿ ಹುಡುಕ ಹಚ್ಚುವ ಅಕ್ಕನ ಜ್ಞಾನವೆತ್ತ! ತಾವೇ ವಿಚಾರಿಸಬೇಕು. ವೇದದಲ್ಲಿ ಯಜ್ಞಯಾಗಾದಿ ಕಾಮ್ಯ ಕರ್ಮಗಳೂ, ಅವುಗಳಿಂದಾಗುವ ಕ್ಷಣಿಕ ಫಲಗಳೂ ಪ್ರತಿಪಾದಿತವಾಗಿವೆ. ಅವೆಲ್ಲವೂ ಹುರುಳಿಲ್ಲದ ಕರ್ಮಗಳು. ಅವನ್ನು ಮಾಡುತ್ತ ಹೋದರೆ ಐಹಿಕ ಸುಖದ ಲಾಲಸೆಯು ಹೆಚ್ಚುತ್ತ ಮುಖ್ಯವಾದ ಉದ್ದೇಶವೇ ಮರೆಯಾಗಿ ಹೋಗುತ್ತದೆ. ಪುರಾಣಗಳ ಮಾತೂ ಅದೇನೆ. ಅಲ್ಲಿ ಕಟ್ಟುಕಲ್ಪನೆಯ ಕಥೆ, ಕೈಗೆ ನಿಲುಕವರ ಕಥೆ ಮುಂತಾದ ಜೊಳ್ಳು ಕಥೆಗಳೇ ಹೊರ್ತು ಆತ್ಮಕಥೆಯೆಲ್ಲಿಯೂ ಇಲ್ಲ. ಅವುಗಳಿಂದ ಸಂತುಷ್ಟನಾಗಬಯಸುವವನು ಮೃಗಜಲವನ್ನು ಬೆನ್ನು ಹತ್ತಿದಂತೆ. ಇನ್ನು ಸ್ಮೃತಿಗಳಾದರೋ ಸ್ತ್ರೀಯರನ್ನು ಪರತಂತ್ರ–

ಪುರುಷತಂತ್ರದಲ್ಲಿಟ್ಟು ಕೇವಲ ಭೋಗದ ಬೊಂಬೆಯನ್ನಾಗಿ ಮಾಡಿದವು. "ನ ಸ್ತ್ರೀಸ್ವಾತಂತ್ರ್ಯಮರ್ಹತಿ'' ಎಂದು ತಮ್ಮ ಸ್ವಾರ್ಥದ ಡೊಳ್ಳು ಡಂಗುರವನ್ನು ಆಗಿನ ಅಜ್ಞಾನಾಂಧಕಾರದ ಹಳ್ಳಿಯಲ್ಲಿ ಸಾರಿದವು. ಆತ್ಮಜ್ಞಾನಿಯಾದ ಅಕ್ಕನು ಇವನ್ನೆಲ್ಲ ನೋಡಿ ವಿಮರ್ಶಿಸಿ–

> "ವೇದಶಾಸ್ತ್ರ ಪುರಾಣಾಗಮಂಗಳೆಲ್ಲ ಕೊಟ್ಟಣವ ಕುಟ್ಟುತ್ತ ನುಚ್ಚು ತೌಡು ಕಾಣಿಭೋ। ಇವ ಕುಟ್ಟಲೇಕೆ? ಅತ್ತಲಿತ್ತ ಹರಿವ ಮನದ ಶಿರವನರಿದಡೆ ಬಚ್ಚಬರಿಯ ಬಯಲು ಚೆನ್ನಮಲ್ಲಿಕಾರ್ಜುನಾ"

ಎಂದು ಸ್ಪಷ್ಟವಾಗಿ ಆತ್ಮಸ್ಫೂರ್ತಿಯಿಂದ ಹೇಳಿಕೊಂಡಿದ್ದಾಳೆ ಇದಲ್ಲದೆ ಇನ್ನೊಂದು ವಚನದಲ್ಲಿ–

> "ಶಿವ ಶಿವಾ! ಆದಿಯನಾದಿ ಎಂಬೆರಡೂ ಇಲ್ಲದ ನಿರವಯವಾಗಿಪ್ಪ ಶಿವನೆ, ನಿಮ್ಮ ನಿಜವನಾರಯ್ಯ ಬಲ್ಲರು? ವೇದಂಗಳಿಗಭೇದ್ಯನು. ಶಾಸ್ತ್ರಂಗಳಿಗಸಾಧ್ಯನು. ಪುರಾಣಕ್ಕೆ ಅಗಮ್ಯನು. ಆಗಮಕ್ಕೆ ಅಗೋಚರನು. ತರ್ಕಕ್ಕೆ ಅತರ್ಕ್ಯನು. ವಾಙ್ಮನಕ್ಕತೀತನೆನಿಪ ಪರಶಿವಲಿಂಗವನು ಕೆಲಂಬರು ಸಕಲನೆಂಬರು, ಕೆಲಂಬರು ನಿಷ್ಕಲನೆಂಬರು, ಕೆಲಂಬರು ಸೂಕ್ಷ್ಮನೆಂಬರು, ಕೆಲಂಬರು ಸ್ಥೂಲನೆಂಬರು. ಈ ಬಗೆಯ ಭಾವದಿಂದ ಹರಿ, ಬ್ರಹ್ಮ, ಇಂದ್ರ, ಚಂದ್ರ, ರವಿ, ಕಾಲ, ಕಾಮ, ದಕ್ಷ ಇವರೊಳಗಾದ ಸಮಸ್ತ ದೇವ-ದಾನವ-ಮಾನವರೆಲ್ಲರೂ ಕಾಣಲರಿಯದೆ ಅಜ್ಞಾನದಿಂದ ಭವಭಾರಿಗಳಾದರು ......"

ಆದ್ದರಿಂದ ಶರಣರೇ ಅವನ್ನು ನೀವು ನಂಬಬೇಡಿ! ಅವುಗಳ ಮಾರ್ಗದಲ್ಲಿಯೂ ಹೋಗಬೇಡಿ! **ನಮ್ಮ ನಮ್ಮ ಅತ್ಮಾನುಭವವೇ ನಿಜವಾದ ವೇದ. ನಮ್ಮ ಹಿಂದಿನ ಚರಿತೆಯ ಸ್ಮರಣವೇ ಪುರಾಣ. ನಮ್ಮ ಮುಂದಿನ ಶಾಶ್ವತ ಸುಖಾಗಮನವೇ ಆಗಮ. ಇವನ್ನು ಬಿಟ್ಟು ಇನ್ನೆಲ್ಲಿಯೂ ಇಲ್ಲ. ಬೇರೆ ಹುಡುಕಿ ವೃಥಾ ತೊಳಲಬೇಡಿ. ಇವನ್ನೇ ಸಾಧಿಸಿ ನೋಡಿ. ಇವು ಸಾಧ್ಯವಾಗಬೇಕಾದರೆ**

ಸುಲಭವಾದ-ಸರಳವಾದ ಭಕ್ತಿ-ಜ್ಞಾನ-ವಿರತಿಗಳೇ ಶ್ರೇಷ್ಠ ಮಾರ್ಗಗಳು ಎಂದು ತಿಳಿಹೇಳಿದಳು. ದುರ್ಬಲರಾದವರಿಗೆ ದುರ್ಲಭವಾದ ಆರ್ಯ ಸಂಸ್ಕೃತಿಯ ಮೋಸ ಕೃತಿಗಳನ್ನು ಬೈಲಿಗೆಳೆದಳು. ತನ್ನ ಜಾಜ್ವಲ್ಯವಾದ ಆತ್ಮತೇಜದ ಬಲದಿಂದ ಸ್ತ್ರೀಯರಿಗೂ ಧರ್ಮದಲ್ಲಿ ಸ್ವಾತಂತ್ರ್ಯವಿದೆ ಎಂದು ಸಾರಿದಳು. ಲಿಂಗಯೋಗವೇ ಮಿಗಿಲಾದ ಯೋಗ. ಅದಕ್ಕೆ ಒಮ್ಮೆ ಮನಸ್ಸುಮಾಡಿದರಾಯಿತು. ಮರಳಿ ಹುರುಳಿಲ್ಲದ ಕುರಿದೈವಗಳಿಗೆ ಶಿರಬಾಗಿ ಬೇಡುವದವಶ್ಯವಿಲ್ಲ. ಪುಣ್ಯತೀರ್ಥವೆಂದು ಹಲುಬಿ ಎಲ್ಲೆಲ್ಲಿಯೂ ಅಲೆದಾಡಬೇಕಿಲ್ಲ.

> "ಹಾಲ ಹಿಡಿದು ಬೆಣ್ಣೆಯನರಸಲುಂಟೆ? ಲಿಂಗದ ಪಾದತೀರ್ಥ ಪ್ರಸಾದವ ಕೊಂಡು ಅನ್ಯ ಬೋಧೆ-ಅನ್ಯಶಾಸ್ತ್ರಕ್ಕೆ ಹಾರೈಸಲೇತಕ್ಕೆ? ಇಷ್ಟಲಿಂಗವಿದ್ದಂತೆ ಸ್ಥಾವರಲಿಂಗಕ್ಕೆ ಶರಣೆಂಬಡೆ ತಡೆಯದೆ ಹುಟ್ಟಿಸುವ ಶ್ವಾನನ ಗರ್ಭದಲ್ಲಿ ........ಗುರುಕೊಟ್ಟ ಲಿಂಗದಲ್ಲಿಯೇ ಎಲ್ಲ ಕ್ಷೇತ್ರಂಗಳು ಎಲ್ಲ ತೀರ್ಥಂಗಳು ಇವೆಯೆಂದು ಭಾವಿಸಿ ಮುಕ್ತರಪ್ಪುದಯ್ಯ ........"

ಎಂದು ಸುಲಭವಾಗಿ ಸವಿಯಾಗಿ ಸ್ಫೂರ್ತಿಯಿಂದ ಬೋಧೆಮಾಡಿದ ಮಹಾಜ್ಞಾನಿಯು ಅಕ್ಕಮಹಾದೇವಿಯು. ಅಂತೆಯೇ 'ಶಿವಜ್ಞಾನ ಸಂಪನ್ನೆ' 'ಸ್ವಾನುಭವ ಸಾಗರ'ವೆಂದು ಹರಿಹರ-ಸಿದ್ಧವೀರಣ್ಣೊಡೆಯರಾದಿ ಕವಿಗಳಿಂದ ಹೊಗಳಲ್ಪಟ್ಟಳು.



# ಅಕ್ಕನ ವಿರತಿ.

---

ಅಕ್ಕನವರ ಜೀವನ ಇತಿಹಾಸವು ಪ್ರಚಂಡವಾದ ವೈರಾಗ್ಯ ಕಾಳಗದ ರಂಗಭೂಮಿಯಾಗಿದೆ. ಅವಳ ಆ ವಿರತಿಯ ಕೆಚ್ಚೆದೆಗೆ ವಿಷಯಗಳೂ ಕರಣಗಳೂ ಸೋತುಹೋಗಿದ್ದಾವೆ. ಅಷ್ಟಮದಗಳೂ, ಅರಿಷಡ್ವರ್ಗಗಳೂ ನಿಲ್ಲಲಾರದೆ ಹಿಮ್ಮೆಟ್ಟಿದ್ದಾವೆ. ತಾಪತ್ರಯಗಳೂ, ಮಲತ್ರಯಗಳೂ ಕುಸಿದು ಕುಗ್ಗಿಹೋಗಿದ್ದಾವೆ. ದುಃಖಪಂಚಕ-ಸಪ್ತವ್ಯಸನಗಳಿಗಂತೂ ಪತ್ತೆಯೇ ಇಲ್ಲ. ಏಕೆಂದರೆ ಅಕ್ಕನವರು ಮಲ್ಲಿಕಾರ್ಜುನನ ಸಾಮ್ರಾಜ್ಯ ಸ್ಥಾಪನೆಗೆ ವಿರತಿಯೇ ನಿಷ್ಕಂಟಕವಾದ ಮಾರ್ಗವೆಂದು ತಿಳಿದು ಅದನ್ನು ಬೆನ್ನುಹತ್ತಿದರು. ವಿಷಯಾದಿ ವ್ಯಾಮೋಹಗಳ ಬಲೆಗೆ ಬಿದ್ದರೆ ಮಲ್ಲಿಕಾರ್ಜುನನು ಒಲಿಯನೆಂದು ಅಕ್ಕನವರು ತುಂಬಾ ನಂಬಿದ್ದರು. ಅಷ್ಟೇ ಅಲ್ಲ, ಅವುಗಳ ಕೈಗೆ ಒಮ್ಮೆ ಸಿಕ್ಕುಬಿದ್ದರೆ ಅವೆಂದಿಗೂ ಬಿಡವು. ಭವಭವಾಂತರದಲ್ಲಿ ಸತ್ತು ಹುಟ್ಟಿ ಬಳಲುವಂತೆ ಮಾಡುತ್ತವೆ. ಅವು ಬಹುದಿನದ ಬಲವಾದ ಶತೃಗಳು. ಎಂಬುವನ್ನು ಕಂಡು ಅನುಭವಿಸಿದ್ದರು.

> "ಸಂಸಾರವೆಂಬ ಹಗೆಯಯ್ಯಾ ತಂದೆ. ಎನ್ನ ವಂಶವಂಶದಪ್ಪದೆ ಅರಸಿಕೊಂಡು ಬರುತ್ತಿದೆಯಯ್ಯಾ! ಎನ್ನುವನರಸಿಯರಸಿ ಹಿಡಿದು ಕೊಲ್ಲುತ್ತಿದೆಯಯ್ಯಾ! ನಿಮ್ಮ ಮರೆಹೊಕ್ಕೆ ಕಾಯಯ್ಯಾ! ಎನ್ನ ಬಿನ್ನಪವನವಧಾರು ಚನ್ನಮಲ್ಲಿಕಾರ್ಜುನಾ"

ಸಂಸಾರವೆಂಬ ಹಗೆಯು ಅಜೇಯವಾದುದು. ಅದರ ಸಹಾಯ ಸಾಧನವೂ ಅಪಾರವಾದುದು. ಹೀಗಾಗಿ ಅದನ್ನು ಜಯಿಸುವುದು ತೀರಾ ಕಷ್ಟದ ಮಾತಾಗಿದ್ದಿತು. ಅಕ್ಕನು ಜನ್ಮಜನ್ಮಾಂತರಗಳಲ್ಲಿ ಬೇರೆ ಸಾಧನಗಳಿಂದ ಅದನ್ನು ಜಯಿಸದೆ ಹೋಗಿದ್ದಳು. ವಿರತಿ ಖಡ್ಗವನ್ನು

ಧರಿಸಿ ಚನ್ನಮಲ್ಲಿಕಾರ್ಜುನನನ್ನು ಬೆಂಗಾವಲಿಗನನ್ನಾಗಿ ಮಾಡಿಕೊಳ್ಳ ದಿದ್ದರೆ ಈಗಲೂ ಅವಳಿಗೆ ಸಾಧ್ಯವಿರಲಿಲ್ಲ. ಆದುದರಿಂದ ಅಕ್ಕನವರು ಇಷ್ಟೊಂದು ದುಃಖದಿಂದ-ದೈನ್ಯದಿಂದ ದೇವರಲ್ಲಿ ಅಂಗಲಾಚಿಕೊಳ್ಳುತ್ತಿದ್ದಳು. ವಿರತಿ ಖಡ್ಗವನ್ನಾದರೂ ಎತ್ತಿ ಝಳಪಿಸಲು ಒಂದು ಶಕ್ತಿ ಬೇಕು; ಧೈರ್ಯ ಬೇಕು ಅದಾವರೂ ದುಸ್ಸಾಧ್ಯವೆಂಬುದನ್ನು ಅಕ್ಕನು ಅರಿತಿದ್ದಳು. ಅವಳು ವಿಷಯಗಳಿಂದ ದೂರಾಗ ಬಯಸುತ್ತಿದ್ದಂತೆ ಅವು ಮಾತ್ರ ಅವಳನ್ನು ಸುತ್ತಿಗೊಳ್ಳಲು ಹಾತೊರೆಯುತ್ತಿದ್ದವು. ಅವಳು ಅವನ್ನು ತೊಡೆಯಲು ಹವಣಿಸುತ್ತಿದ್ದರೂ ಅವಳ ಮನಸ್ಸು ಅವುಗಳಲ್ಲಿ ಹೋಗಿ ಸಂಧಾನವನ್ನು ಬೆಳೆಸುತ್ತಿದ್ದಿತು. ಹೀಗೆ ಸುತ್ತಿ ಸುಳಿದು ಬರುವ ವಿಷಯಗಳನ್ನೂ ಅವುಗಳಲ್ಲಿ ಹರಿದುಹೋಗುವ ಮನಸ್ಸನ್ನೂ ತಡೆದು ನಿಲ್ಲಿಸುವುದೆಂದರೆ ಬಹು ಕಷ್ಟಸಾಧ್ಯವಾದ ಮಾತಾಗಿದ್ದಿತು. ಅದಕ್ಕಾಗಿ ಅವಳು ಎಷ್ಟೋ ಯತ್ನಿಸುತ್ತಿದ್ದಳು. ಆದರೂ ಅವುಗಳ ಕೈಯೇ ಮೇಲಾಗುವ ಪ್ರಸಂಗ ಬಂದೊದಗುವಂತಾಗಲು—

"ಆವಾಗಲೂ ಎನ್ನ ಮನ ಉಪರಕ್ಕೆ ಹರಿವುದು. ಕಾಣಲಾರೆ
ನಯ್ಯಾ ನಿಮ್ಮನು. ಭೇದಿಸಲರಿಯೆನಯ್ಯಾ (ವಿಷಯವನು)
ಮಾಯದ ಸಂಸಾರದಲ್ಲಿ ಸಿಲುಕಿದೆನು. ಎನ್ನ ದೇವ ಚನ್ನಮಲ್ಲಿ
ಕಾರ್ಜುನಯ್ಯಾ ನಿಮ್ಮ ಹೊದ್ದುವಂತೆ ಮಾಡಾ ನಿಮ್ಮ ಧರ್ಮ"

ಎಂದು ಅನನ್ಯಗತಿಕಳಾಗಿ ದೇವರಲ್ಲಿ ಮೊರೆಯಿಡುತ್ತಿದ್ದಳು. ತನ್ನ ಅಶಕ್ತಿಯನ್ನು ಹೇಳಿಕೊಳ್ಳುತ್ತಿದ್ದಳು. ಬರೀ ವಿರತಿಯೊಂದು ನುಡಿದರೆ ಆಗದು. ಮಾಯಾ ಕೋಲಾಹಲನೆಂಬ ಬಿರುದುತೊಟ್ಟ ಅಲ್ಲಮನೂ ಸಹ ಒಮ್ಮೊಮ್ಮೆ ಮುಗ್ಗರಿಸುತ್ತಿದ್ದನು. ಆದರೆ ಆ ಮುಗ್ಗರಿಸುವಿಕೆಯೇ ಆತನ ಪರಿಶುದ್ಧ ಜೀವನಕ್ಕೆ ಒರೆಗಲ್ಲಾಯಿತು. ಆದರಿಂದ ಅವನ ಜೀವನವು ಚೊಕ್ಕಚಿನ್ನದಂತೆ ಮತ್ತೂ ಪ್ರಕಾಶಮಾನವಾಯಿತು. ಅಕ್ಕನಿಗೂ ಅಂತಹ ದುರ್ಧರ ಪ್ರಸಂಗಗಳು ಬಾರದಿರಲಿಲ್ಲ. ಬಂದರೂ ಅವುಗಳ ಬಲಿಗೆ ಅವಳು ಬೀಳಲಿಲ್ಲ.

"ಬಿಟ್ಟೆನೆಂದರೆ ಬಿಡದೀ ಮಾಯೆ. ಬಿಡದಿದ್ದರೆ ಬೆಂಬತ್ತಿತ್ತು ಮಾಯೆ. ಯೋಗಿಗೆ ಯೋಗಿಣಿಯಾಗಿತ್ತು ಮಾಯೆ. ಸವಣಗೆ ಸವಣಿಯಾಗಿತ್ತು ಮಾಯೆ. ಯತಿಗೆ ಪರಾಕಿಯಾಯಿತ್ತು ಮಾಯೆ. ನಿನ್ನ ಮಾಯೆಗೆ ನಾನಂಜುವಳಲ್ಲ. ಚನ್ನಮಲ್ಲಿಕಾರ್ಜುನ ನಿಮ್ಮಾಣೆ."

ಎಂದು ಆತ್ಮಕೆಚ್ಚಿನಿಂದ ವಿರತಿಖಡ್ಗದಿಂದ ಅದನ್ನು ಜಯಿಸಿದಳು. ವೀರವಿರಕ್ತಾಗ್ರಣಿಯಾದಳು. ಚನ್ನಮಲ್ಲಿಕಾರ್ಜುನನ ಕೈವಿಡಿದಳು.

ಅಕ್ಕನ ವೈರಾಗ್ಯದ ವಿಚಾರಕ್ಕೆ ಇಲ್ಲಿ ಇನ್ನೊಂದು ಮಾತನ್ನು ಹೇಳದೆ ತೀರುವಂತಿಲ್ಲ. ಅಕ್ಕನ ಹೃದಯವು ಕೇವಲ ಕಟು ವೈರಾಗ್ಯದ್ದಲ್ಲ. ಅದು ಅತಿ ವಾತ್ಸಲ್ಯಮಯವೂ ಆಗಿದ್ದಿತು. ಅವಳು ನಾನು ವಿರತಳು, ನನಗಾರ ಹಂಗಿಲ್ಲ. ನಾನಾರ ಆಗು ಹೋಗುಗಳನ್ನು ಲೆಕ್ಕಿಸುವವಳಲ್ಲ ಎಂದು ಭಾವಿಸುತ್ತಿರಲಿಲ್ಲ. ಹಾಗಿದ್ದರೆ ಅಂತಹ ವಿರತಿಯು ವಿರತಿಯೇ ಅಲ್ಲ. ವಿರತಿಯು ಆತ್ಮೋದ್ಧಾರಕ್ಕಾಗಿಯೇ ಹೊರ್ತು ಅನ್ಯರ ವಿಡಂಬನೆಗಾಗಿ ಅಲ್ಲ; ಆತ್ಮ ಅಹಂಕಾರಕ್ಕಲ್ಲ. ತನ್ನಂತೆ ಪರರನ್ನು ಬಗೆದು ಅವರ ಆಗುಹೋಗುಗಳನ್ನು ವಿಚಾರಿಸಿ ಅವರನ್ನೂ ತನ್ನ ಮಟ್ಟಕ್ಕೆ ಎಳೆದೊಯ್ಯಬೇಕು. ತನ್ನ ಸುಖದ ಲವಲೇಶವನ್ನಾದರೂ ಅವರಿಗೂ ನೀಡಬೇಕು. ತನ್ನಾತ್ಮದ ತಿಳಿವನ್ನು ಅವರಿಗೂ ತಿಳಿಸಬೇಕು. ಅದುವೇ ವಿರತಿ. ಅಕ್ಕಮಹಾದೇವಿಯು ಅಂತಹ ವಿರತಿಯುಳ್ಳವಳು. ಅವಳು ಆತ್ಮಸುಖಕ್ಕೆ ತಾನು ಹಂಬಲಿಸಿದಂತೆ ಅನ್ಯರ ಸುಖೋದಯಕ್ಕೂ ಹವಣಿಸಿದಳು.

"ಚಿನ್ನಕ್ಕರಿಸಿನ ಚಿನ್ನಕ್ಕರಿಸಿನ ಚಿನ್ನಕ್ಕರಿಸಿನವ ಕೊಳ್ಳಿರವ್ವಾ!
ನಮ್ಮ ನಲ್ಲನ ಮೆಯ್ಯ ಹುತ್ತದ ಅರಿಸಿನವ ಕೊಳ್ಳಿರವ್ವಾ!!
ಒಳಗುಂದಪದರಿಸಿನವನಿಂದು ಚನ್ನಮಲ್ಲಿಕಾರ್ಜುನನಪ್ಪಿರವ್ವಾ!!!"

ಎಂಬುದಾಗಿ ಒಳ್ಳೇ ಒಲುಮೆಯಿಂದ ತನ್ನ ಗೆಳತಿಯರಿಗೂ ಬೋಧಿಸುತ್ತಿದ್ದಳು. ತಾನು ಹಿಡಿದ ಮಾರ್ಗದಲ್ಲಿ ತನಗಾದ ಸುಖವನ್ನು ತಾನೊ

ಬ್ಬಳೇ ಭೋಗಿಸುವುದು ಒಂದು ವಂಚನೆಯೆಂದು ಅಕ್ಕನು ಅರಿತಿದ್ದಳು; ಅದರಂತೆ ಆಚರಿಸಿದಳು. ಅಕ್ಕನು ಆತ್ಮವಂಚಕಳಾಗದಂತೆ ಜನವಂಚಕಳೂ ಆಗಲಿಲ್ಲ. ಹೀಗೆ ಅಕ್ಕನ ವಿರತಿಯು ಒಂದರಲ್ಲಿ ವಿರಸವಾಗಿದ್ದರೆ ಇನ್ನೊಂದರಲ್ಲಿ ಸರಸವಾಗಿದ್ದಿತು. ಸಜ್ಜನ ಸದ್ವಿಷಯವೆಂದರೆ ಅವಳಿಗೆ ಒಳ್ಳೇ ಸರಸ. ಆದೇ ದುರ್ಜನ ದುರ್ವಿಷಯಗಳೆಂದರೆ ಅವುಗಳಲ್ಲಿ ಹೇಳಲಾಗದ ವಿರಸ.

ವಿಷಯಗಳಲ್ಲಿ—

"ಮನೆ ಮನೆ ತಪ್ಪದೆ ಕೈಯೊಡ್ಡಿ ಬೇಡುವಂತೆ ಮಾಡಯ್ಯಾ. ಬೇಡಿದರೆ ಇಕ್ಕದಂತೆ ಮಾಡಯ್ಯಾ. ಇಕ್ಕಿದಡೆ ನೆಲಕ್ಕೆ ಬೀಳುವಂತೆ ಮಾಡಯ್ಯಾ! ನೆಲಕ್ಕೆ ಬಿದ್ದೊಡೆ, ನಾನೆತ್ತಿಕೊಂಬುದಕ್ಕೆ ಮುನ್ನವೆ ಶುನಿ ಎತ್ತಿಕೊಂಬತೆ ಮಾಡಯ್ಯ ಚನ್ನಮಲ್ಲಿಕಾರ್ಜುನಾ!"

ಇಂದ್ರಿಯಗಳಲ್ಲಿ —

"ಕಾಯ ಕರ್ರನೆ ಕಂದಿದರೇನು? ಕಾಯ ಮಿರ್ರನೆ ಮಿಂಚಿದರೇನು? ಅಂತರಂಗ ಶುದ್ಧವಾದ ಬಳಿಕ, ಚನ್ನಮಲ್ಲಿಕಾರ್ಜುನ ನೊಲಿದ ಕಾಯ ಎಂತಾದೊಡೆಮಗೇನಯ್ಯ?"

ವಿಷಯಿಗಳಲ್ಲಿ—

"ಅರಿಯದವರೊಡನೆ ಸಂಗವ ಮಾಡಿದರೆ, ಕಲ್ಲು ಹೊಯ್ದು ಕಿಡಿಯ ತೆಗೆದುಕೊಂಬಂತೆ. ಬಲ್ಲವರೊಡನೆ ಸಂಗವ ಮಾಡಿದರೆ, ಹೊಸೆದು ಬೆಣ್ಣೆಯ ತೆಗೆದುಕೊಂಬಂತೆ ಚನ್ನಮಲ್ಲಿಕಾರ್ಜುನಯ್ಯ! ನಿಮ್ಮ ಶರಣರ ಸಂಗ ಕರ್ಪುರಗಿರಿಯ ಉರಿಕೊಂಡಂತೆ"

"ಭವಿಸಂಗವಳಿದು ಶಿವಭಕ್ತನಾದ ಬಳಿಕ ಭಕ್ತಂಗೆ ಭವಿಸಂಗ ವತಿಘೋರ ನರಕ. ಶರಣ ಸತಿ ಲಿಂಗ ಪತಿಯಾದ ಬಳಿಕ ಶರಣಂಗೆ ಸತಿಸಂಗವತಿಘೋರ ನರಕ. ಚನ್ನಮಲ್ಲಿಕಾರ್ಜುನ ಲಿಂಗೈಕ್ಯಂಗೆ ಪ್ರಾಣಗುಣವಳಿಯದವರ ಸಂಗವೇ ಭಂಗ."

ಎಂಬ ಈ ವಚನಗಳು ಆ ಮಾತಿಗೆ ಉಪಷ್ಟಂಭಕವಾಗಿವೆ. ಹೀಗೆ ಅಕ್ಕನ ವಿರತಿಯು, ವಿಷಯ ವಿಷಯಿಗಳಲ್ಲಿ ವಿರಸವಾಗಿ ವಿಹ್ವಲರಲ್ಲಿ ಕೋಮಲವಾಗಿದ್ದಿತು. ಅದರಿಂದ ಅಕ್ಕನ ವಿರತಿಯು ವಿರಸವಾಗದೆ. ಜನಾಂಗದ ಜೀವವನ್ನು ಇಂದಿಗೂ ಎಳೆಯುತ್ತಿದೆ.

# ಅಕ್ಕನ ಮಾಯಾವಾದ.

ಮಾಯೆಯೆಂದರೇನು? ಎಂಬ ಪ್ರಶ್ನೆಗೆ ಥಟ್ಟನೆ ನಿರ್ವಿವಾದವಾಗಿ ಉತ್ತರವನ್ನು ಹೇಳುವುದು ಕೊಂಚ ಕಷ್ಟದ ಮಾತು. ಒಬ್ಬರು ಅಜ್ಞಾನ ಮಾಯೆಯೆಂದರೆ ಇನ್ನೊಬ್ಬರು ಆಶೆಯೇ ಮಾಯೆಯೆಂದೆನ್ನುವರು. ಒಬ್ಬರು ಹೆಣ್ಣು ಮಾಯೆಯೆಂದರೆ ಇನ್ನೊಬ್ಬರು ಹೊನ್ನು ಮಾಯೆಯೆನ್ನುವರು. ಆದರೆ ಅಕ್ಕನು ಇವೆಲ್ಲಕ್ಕೂ ಮೂಲವಾದ ಅನ್ನವೇ ಮಾಯೆಯೆಂದು ಸೂಕ್ಷ್ಮವಾಗಿ ಪರ್ಯಾಯದಿಂದ ತಿಳಿಸುತ್ತಾಳೆ. ಆಶೆ-ಅಜ್ಞಾನಗಳಿಗೂ ಲೋಭ-ಮೋಹಗಳಿಗೂ ಅನ್ನವೇ ಮೂಲಕಾರಣ. ಅನ್ನದಿಂದಲೇ ಹೆಣ್ಣಿನ ಬಯಕೆ; ಅನ್ನಕ್ಕಾಗಿಯೇ ಹೊನ್ನಿನಗಳಿಕೆ, ಅನ್ನಗುಣದಿಂದಲೇ ಮುಕ್ಕಣ್ಣನ ಮರೆವಿಕೆ. ಆದುದರಿಂದಲೆ—

"ಆವಾಗಳೂ ಎನ್ನ ಮನ ಉದರಕ್ಕೆ ಹರಿವುದು. ಕಾಣಲಾರೆನಯ್ಯ ನಿಮ್ಮವನು. ಭೇದಿಸಲರಿಯೆನಯ್ಯ! ಮಾಯೆಯ ಸಂಸಾರದಲ್ಲಿ ಸಿಲುಕಿದೆನು......"

ಮೊದಲು ಮನಸ್ಸನ್ನೆಳೆವುದು ಅನ್ನ. ಅನಂತರ ಹೆಣ್ಣು-ಹೊನ್ನುಗಳು. ಅನ್ನದಿಂದಲೇ ಎಲ್ಲ ಇಂದ್ರಿಯ ವಿಕಾರಗಳು. ಅಜ್ಞಾನ ಆಶೆಗಳು ಅದರಿಂದಲೆ. ಆದ್ದರಿಂದ ಅಕ್ಕನು ಈ ನಿರ್ಧಾರಕ್ಕೆ ಬಂದಳು.

"ಪುರುಷನ ಮುಂದೆ ಮಾಯೆ ಸ್ತ್ರೀಯೆಂಬ ಅಭಿಮಾನದಿಂದ ಕಾಡಿತ್ತು. ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ ಅಭಿಮಾನವಾಗಿ ಕಾಡಿತ್ತು."

ಎಂಬ ವಚನದಿಂದ ಅನ್ನವೇ ಪುರುಷನಿಗೆ ಹೆಣ್ಣಾಗಿ, ಹೆಣ್ಣಿಗೆ ಗಂಡಾಗಿ ಉಭಯ ಸಾಧಾರಣವಾಗಿ ಕಾಡುವುದು. ಅದುಕಾರಣ ಕೇವಲ ಹೆಣ್ಣೇ ಮಾಯೆಯೆಂದು ಜರಿವುದು ಅನುಚಿತವು. ಎಂದು ಅಕ್ಕನವರು ತಮ್ಮ ವಿಚಾರ ರೇಖೆಯನ್ನು ನಸುಮುಂದಕ್ಕೆ ಎಳೆದೊಯ್ದಿದ್ದಾರೆ.

ಅನ್ನವು ಮಾಯೆಯೆಂದು ಹೇಳಿದ ಮಾತ್ರಕ್ಕೆ ಉಳಿದವುಗಳು ಅಲ್ಲೆಂದು ಅಕ್ಕನ ಅಭಿಪ್ರಾಯವಲ್ಲ. ಅಧಃಪತಕ್ಕೆ ಎಳೆದೊಯ್ಯುವ ಯಾವ ಗುಣವಿದ್ದರೂ ಅದು ಮಾಯೆ. ಈ ವಿಷಯವನ್ನು ಅಕ್ಕನು ಮುಂದಿನ ಈ ವಚನಗಳಲ್ಲಿ ತೋರಿಸಿರುವುದಲ್ಲದೆ ಮಾಯೆದ ಬಗೆಬಗೆಯ ಕಾಟನ್ನು ಬಲು ಚನ್ನಾಗಿ ಚಿತ್ರಿಸಿದ್ದಾಳೆ.

"ಕಾಯಕ್ಕೆ ನೆಳಲಾಗಿ ಕಾಡಿತ್ತು ಮಾಯೆ. ಪ್ರಾಣಕ್ಕೆ ಮನವಾಗಿ ಕಾಡಿತ್ತು ಮಾಯೆ. ಮನಕ್ಕೆ ನೆನಹಾಗಿ ಕಾಡಿತ್ತು ಮಾಯೆ. ನೆನಹಿಂಗೆ ಅರಿವಾಗಿ ಕಾಡಿತ್ತು ಮಾಯೆ. ಜಗದ ಜಂಗುಳಿಗಳಿಗೆ ಬೆಂಗೋಲನೆತ್ತಿ ಕಾಡಿತ್ತು ಮಾಯೆ. ಚನ್ನಮಲ್ಲಿಕಾರ್ಜುನ ನೀನೊಡ್ಡಿದ ಮಾಯೆಯನಾರೂ ಗೆಲಲಾರರು."

"ಬಿಟ್ಟೆನೆಂದರೆ ಬಿಡದೀ ಮಾಯೆ. ಬಿಡದಿದ್ದರೆ ಬೆಂಬತ್ತಿತ್ತು ಮಾಯೆ. ಯೋಗಿಗೆ ಯೋಗಿಣಿಯಾಯಿತ್ತು ಮಾಯೆ, ಸವಣಿಗೆ ಸವಣಿಯಾಯಿತ್ತು ಮಾಯೆ. ಯತಿಗೆ ಪರಾಕಿಯಾಯಿತ್ತು ಮಾಯೆ- ನಿನ್ನ ಮಾಯೆಗೆ ನಾನಂಜುವಳಲ್ಲ. ಚನ್ನಮಲ್ಲಿಕಾರ್ಜುನದೇವ ನಿಮ್ಮಾಣೆ."

ಹೀಗೆ ಹಲವು ವಿಧವಾದ ಮಾಯೆ —

> "ಹರಿಯ ನುಂಗಿತ್ತು ಮಾಯೆ. ಅಜನ ನುಂಗಿತ್ತು ಮಾಯೆ. ಇಂದ್ರನ ನುಂಗಿತ್ತು ಮಾಯೆ. ಚಂದ್ರನ ನುಂಗಿತ್ತು ಮಾಯೆ. ಬಲ್ಲೆನೆಂಬ ಬಲುಗೈಯರ ನುಂಗಿತ್ತು ಮಾಯೆ. ಅರಿಯೆನೆಂಬ ಅಜ್ಞಾನಿಗಳ ನುಂಗಿತ್ತು ಮಾಯೆ. ಈಳೇಳು ಭವನವ ಸಾರದಿ ಗೊಂಡಿತ್ತು ಮಾಯೆ. ಚನ್ನಮಲ್ಲಿಕಾರ್ಜುನಯ್ಯಾ ಎನ್ನ ಮಾಯೆ ಮಾಣಿಸಾ ಕರುಣಿ."

ಮಾಯೆಯು ಯಾವ ದೇವಮಾನವರನ್ನೂ ಬಿಟ್ಟಿಲ್ಲ. ಅನ್ನಕ್ಕೊಳಗಾದವರೆಲ್ಲರೂ ಅದಕ್ಕೆ ಗುರಿ. ಅದನ್ನು ಕಳೆಯಬೇಕಾದರೆ ಅನ್ನದಲ್ಲಿರುವ ಪದಾರ್ಥತ್ವವನ್ನು ಕಳೆದು ಪ್ರಸಾದವನ್ನಾಗಿ ಮಾಡಿಕೊಂಡರೆ ಆ ಮಾಯೆಯು ತಾನೇ ಮಾಯವಾಗುತ್ತದೆ. ಆದುದರಿಂದ ಅನ್ನಗುಣವೇ ಮಾಯೆ. ಪ್ರಸಾದಗುಣವೇ ನಿರ್ಮಾಯೆ ಎಂಬುದು ಅಕ್ಕನ ಕೊನೆಯ ಸಿದ್ಧಾಂತವೆಂದು ಹೇಳಬಹುದಾಗಿದೆ.



# ಅಕ್ಕನ ಏಕೇಶ್ವರ ವಾದ.

——

ಏಕೇಶ್ವರವಾದವು ಸಂಕುಚಿತವಾದ ಸ್ವಾರ್ಥಯುತವಾದ ವಾದ ವೆಂದು ಕೆಲವರ ಅಭಿಪ್ರಾಯ. ಆದರೆ ಅದುವೇ ಸರ್ವಸಮತಾಭಾವಕ್ಕೂ ಒಕ್ಕೂಟಕ್ಕೂ ಮೂಲಬೀಜವೆಂದು ನಮ್ಮ ಶರಣರ ಅಭಿಪ್ರಾಯ. ವಿಚಾರಿಸಿದರೆ ಇದುವೇ ಸತ್ಯವಾದ ಮಾರ್ಗವೆಂದು ವೇದ್ಯವಾಗುವುದು. ಒಬ್ಬನ ಮಕ್ಕಳಾಗಿ ಶಿಷ್ಯರಾಗಿ ಬಾಳಿದರೆ ನಮ್ಮಲ್ಲಿ ಐಕ್ಯತೆ-ಸಮತಾ ಭಾವಗಳು ಬಾರದಿರುವವೆ? ನಾವು ಬೇರೆ ಬೇರೆ ದೇವರನ್ನು ಕಲ್ಪಿಸಿ ಭಜಿಸಿ ಪೂಜಿಸುವದರಿಂದ ಆ ಆ ದೇವರ ಅಭಿಮಾನವು ನಮ್ಮಲ್ಲಿ ಹೆಚ್ಚಿ ನಮ್ಮ ನಮ್ಮ ದೇವರ ಸರ್ವತೋವಿಧವಾದ ಉತ್ಕರ್ಷಕ್ಕಾಗಿ ಅನ್ಯದೇವರ ಅಪಕರ್ಷಕ್ಕಾಗಿ ವಾದ-ಕಲಹಗಳನ್ನು ಮಾಡಹತ್ತುತ್ತೇವೆ. ನಮ್ಮ ನಮ್ಮಲ್ಲಿ ಭಿನ್ನ ಭಿನ್ನವಾಗಿ ಐಕ್ಯದಬಲ, ಸಮತಾಭಾವದ ಸೊಗಸು ನಮ್ಮಿಂದ ದೂರಾಗಿ ಹೋಗುತ್ತವೆ; ಹೋಗಿವೆ. ಹೀಗಾಗದೆ ನಮ್ಮಲ್ಲಿ ಸಮತಾಭಾವವೂ ಐಕ್ಯವೂ ಉಂಟಾಗಬೇಕಾದರೆ ಏಕೇಶ್ವರವಾದವು ಬಹು ಪ್ರಾಮುಖ್ಯವಾದುದು. ಆದುವರಿಂದಲೇ ನಮ್ಮವರು ಅದಕ್ಕೆ ಕೈಹಾಕಿದರು. ಟೊಂಕ ಕಟ್ಟಿ ಅದನ್ನು ವಿಶೇಷವಾಗಿ ಪ್ರತಿಪಾದಿಸಿದರು. ಹಾಗೆ ಹೇಳುವಾಗ ಒಂದರಲ್ಲಿಯೇ ದೃಢವಾಗಿ ಮನಸ್ಸನ್ನು ತಿರುಗಿಸುವಾಗ ಇನ್ನೊಂದನ್ನು ಕೊಂಚ ಜರಿದು ಹೇಳುವುದು ಸಹಜವಾದ ಮಾತು. ಅಲ್ಲಲ್ಲಿ ಒಂದೊಂದು ಕಟುಶಬ್ದವನ್ನು ಉಪಯೋಗಿಸುವುದು ಅನಿವಾರ್ಯವಾದ ಮಾರ್ಗ. ಅಷ್ಟು ಮಾತ್ರದಿಂದಲೇ ಉಳಿದ ದೇವರು ಕೀಳೆಂದು ಅವರ ಭಾವನೆಯಲ್ಲ. ಕೀಳೆಂದು ಭಾವಿಸುವುದು ಅವರ ಸಿದ್ಧಾಂತವೂ ಅಲ್ಲ. ಆದರೆ ಆ ಮಾತುಗಳ ಹಿಂದೆ ಒಂದು ವಿಶಾಲವಾದ ಭಾವನೆಯಿದೆ. ಎಲ್ಲರೂ ಒಂದಾಗಿ ಒಬ್ಬನ ಮಕ್ಕಳಾಗಿ ಅಕ್ಕರೆ

ಆನಂದಗಳನ್ನು ಹೊಂದಲಿ ಎಂಬ ಹೃದಯದ ಮರುಕು ಇದೆ. ಅದೇ ಭಾವನೆಯಲ್ಲಿ ನಮ್ಮ ಅಕ್ಕಗಳೂ ಕೆಲವು ವಚನಗಳನ್ನು ಹೇಳಿದ್ದಾರೆ. ಅವುಗಳಲ್ಲಿ—

"ಕಾಮ ಬಲ್ಲಿದನೆಂದರೆ ಉರುಹಿ ಭಸ್ಮವ ಮಾಡಿದ. ಬ್ರಹ್ಮ ಬಲ್ಲಿದನೆಂದರೆ ಶಿರವ ಚಿವುಟಿಯಾಡಿದ. ಎಲೆ ಅವ್ವಾ! ನೀನು ಕೇಳಾ ತಾಯಿ! ವಿಷ್ಣು ಬಲ್ಲಿದನೆಂದರೆ ಆಕಳ ಕಾಯ್ದಿರಿಸಿದ. ತ್ರಿಪುರದ ಕೋಟಿ ಬಲ್ಲಿತ್ತೆಂದರೆ ನೊಸಲ ಕಂಗಳಲ್ಲಿ ಉರುಹಿದ ನವ್ವಾ! ಇದುಕಾರಣ ಚನ್ನಮಲ್ಲಿಕಾರ್ಜುನ ಗಂಡನೆನಗೆ. ಜನನ ಮರಣಕ್ಕೊಳಗಾಗದ ಬಲುಹನೇನ ಬಣ್ಣಿಪೆನವ್ವಾ!"

ಶಿವನೊಬ್ಬನೇ ಸರ್ವೋತ್ಕೃಷ್ಟ ದೇವರು. ಆತನು ಸಾವಿಲ್ಲದ ಕೇಡಿಲ್ಲದ ದೇವ. ಭವವಿಲ್ಲದ ಭಯವಿಲ್ಲದ ದೇವ. ತೆರಹಿಲ್ಲದ ಕುರುಹಿಲ್ಲದ ದೇವ. ಸೀಮೆಯಿಲ್ಲದ ನಿಸ್ಸೀಮ ದೇವ. ದೇವ ದೇವ ಮಹಾದೇವ. ಆತನೇ ಜಗದಾರಾಧ್ಯ. ಎಲ್ಲರೂ ಶರಣ ಸತಿಯರಾಗಿ ಆತನನ್ನೇ ಒಲಿಸಿಕೊಳ್ಳಿರಿ. ಎಲ್ಲರೂ ಆತನ ಕೈವಿಡಿದು ಸುಖವಾಗಿ ಶಾಶ್ವತವಾಗಿ ಬಾಳಿರಿ! ಎಲ್ಲರೂ ಒಂದಾಗಿ ಮುಂದಾಗಿ ಆನಂದವಾಗಿರಿ! ಎಂದು ಹೇಳುವುದೇ ಅಕ್ಕನ ಬಾಳಿನ ತಿರಳು.

"ನಚ್ಚುಗೆ ಮನ ನಿಮ್ಮಲ್ಲಿ, ಮಚ್ಚುಗೆ ಮನ ನಿಮ್ಮಲ್ಲಿ. ಸಲಗುಗೆ ಮನ ನಿಮ್ಮಲ್ಲಿ, ಸೋಲುಗೆ ಮನ ನಿಮ್ಮಲ್ಲಿ ಅಳಲುಗೆ ಮನ ನಿಮ್ಮಲ್ಲಿ, ಬಳಲುಗೆ ಮನ ನಿಮ್ಮಲ್ಲಿ, ಕರಗುಗೆ ಮನ ನಿಮ್ಮಲ್ಲಿ, ಕೊರಗುಗೆ ಮನ ನಿಮ್ಮಲ್ಲಿ. ಎನ್ನ ಪಂಚೇಂದ್ರಿಯಂಗಳು ಕಬ್ಬುನ ಉಂಡ ನೀರಿನಂತೆ, ನಿಮ್ಮಲ್ಲಿ ಬೆರಸುಗೆ ಚನ್ನಮಲ್ಲಿಕಾರ್ಜುನಯ್ಯಾ!"

ಎಂಬುದಾಗಿ ಕೊನೆಗೆ ಅಕ್ಕನು ಐಕ್ಯದ ಏಕೇಶ್ವರ ಪವಿತ್ರಮಂತ್ರವನ್ನು ಜಪಿಸಹತ್ತಿದಳು.



# ಅಕ್ಕನ ಅಷ್ಟಾವರಣ ನಿಷ್ಠೆ.

---

ವೀರಶೈವರಿಗೆ ಅಷ್ಟಾವರಣವೇ ಅಂಗವಾಗಿದೆ. ಅದಿಲ್ಲದೆ ಅವರ ಮುಂದಿನ ಯಾವ ಕ್ರಿಯೆಯೂ ಸಾಗುವದಿಲ್ಲ. ಅಷ್ಟಾವರಣದಲ್ಲಿ ಸಾಧನವೂ ಇದೆ; ಸಾಧ್ಯವೂ ಇದೆ. ಸಾಧ್ಯವನ್ನು ಸಾಧಿಸಿಕೊಡುವ ಸಿದ್ಧಮೂರ್ತಿಗಳೂ ಇದ್ದಾರೆ. ಇದರಿಂದ ಅವರ ನಿತ್ಯಕ್ರಿಯೆಯು ಸಾಂಗವಾಗಿ ಸಾಗುತ್ತದೆ. ಅಷ್ಟಾವರಣದಿಂದ ಆಚ್ಛಾದಿತನಾದ ವೀರಶೈವನಿಗೆ ಇನ್ನಾವ ಅನಿಷ್ಟಗಳೂ ಅಂಟಿಗೊಳ್ಳುವದಿಲ್ಲ. ಅಷ್ಟಾವರಣವೇ ವೀರಶೈವನ ಹೆಗ್ಗುರುತು.

ಅಷ್ಟಾವರಣವೆಂದರೆ **ಗುರು - ಲಿಂಗ - ಜಂಗಮ - ಭಸ್ಮ - ರುದ್ರಾಕ್ಷಿ - ಮಂತ್ರ - ಪಾದೋದಕ - ಪ್ರಸಾದ.** ಇವುಗಳಲ್ಲಿ ಮೊದಲಿನ ಮೂವರು ಆರಾಧ್ಯಮೂರ್ತಿಗಳು. ಮುಂದಿನ ಮೂರು ಸಾಧನಗಳು. ಕೊನೆಯ ಎರಡು ಸಾಧ್ಯಗಳು. ಇವೇ ಫಲ. ಇವನ್ನು ಬಿಟ್ಟು ಇನ್ನೊಂದು ಫಲ ಪದವಿಯನ್ನು ಇವರು ಬಯಸುವಂತಿಲ್ಲ. ಈ ದೇವತೆಗಳನ್ನು ಬಿಟ್ಟು ಬೇರೆ ದೇವರನ್ನು ಮರೆಹೋಗುವಂತಿಲ್ಲ. ಈ ಸಾಧನಗಳ ವಿನಹ ಮತ್ತೊಂದು ಸಾಧನವನ್ನು ಸ್ವೀಕರಿಸುವಂತಿಲ್ಲ. ಇವುಗಳಲ್ಲಿಯೇ ಇವರ ನಿಷ್ಠೆಯು ಬಲಿಯಬೇಕು. ಇವುಗಳಿಂದಲೇ ಇವರು ಬದುಕಬೇಕು; ಬದುಕುವರು. ಹಿಂದೆ ಬದುಕಿದ್ದಾರೆ. ಆದ್ದರಿಂದಲೇ ಅಕ್ಕನಿಗೂ ಅಷ್ಟಾವರಣದಲ್ಲಿ ಮಿಗಿಲಾದ ನಿಷ್ಠೆಯಿತ್ತು; ಅಪಾರವಾದ ಶ್ರದ್ಧೆಯಿತ್ತು.

೧. **ಗುರು:-** "ತದ್ವಿಜ್ಞಾನಾರ್ಥ ಸಗುರುಮೇವಾಭಿಗಚ್ಛೇತ್" ಎಂಬ ಶೃತಿಯಂತೆ ಸಂಸಾರತಾಪವು ನೀಗಿ, ಅಜ್ಞಾನಾಂಧಕಾರವು

ತೊಲಗಿ, ನಿಜವಾದ ಜ್ಞಾನವು ಬರಬೇಕಾದರೆ ಗುರುವಿನ ವಿನಹ ಬೇರೆ ಗತ್ಯಂತರವಿಲ್ಲ. ಲಿಂಗಜ್ಞಾನಿ ಲಿಂಗಾನುಭಾವಿಯಾದ ಗುರುವು ಪ್ರತ್ಯಕ್ಷ ಪರಮಾತ್ಮಸ್ವರೂಪನು. ಶಿಷ್ಯರ ಉದ್ಧಾರಕ್ಕಾಗಿ ಸಾಕಾರ ಸ್ವರೂಪ ವನ್ನು ತಳೆದ ಪರಶಿವಸ್ವರೂಪನು. ಆತನು ಭವದ ಬೇಗೆಯಿಂದ ಬಳಲಿ ಬಂದು ಶರಣಾಗತರಾದ ಭಕ್ತರಿಗೆ ನಿಜವಾದ ತತ್ವೋಪದೇಶ ವನ್ನು ಮಾಡಿ, ಉಪಾಸನೆಗೆ ನಿರಾಕಾರ ವಸ್ತುವನ್ನು ಸಾಕಾರಕ್ಕೆ ತಂದುಕೊಡುವ ಆಧ್ಯಾತ್ಮ ಶಕ್ತಿಯುಳ್ಳವನು. ಒಟ್ಟಿನಲ್ಲಿ ಗುರುವೆಂದರೆ ಸಂಸಾರವನ್ನು ತೊಲಗಿಸಿ, ಅಂಗವಿಕಾರವನ್ನು ಅಳಿಸಿ, ಲಿಂಗದ ನೆಲೆ-ಕಲೆಗಳನ್ನು ಹೇಳಿ ತಿಳಿಸಿಕೊಡುವ ಬೋಧಕನು.

"ಸಂಸಾರ ಸಾಗರದೊಳಗೆ ಬಿದ್ದೆ ನೋಡಾ ನಾನು. ಸಂಸಾರ ನಿಸ್ಸಾರವೆಂದು ತೋರಿದನೆನಗೆ ಗುರು. ಅಂಗವಿಕಾರದ ಸಂಗವ ನಿಲಿಸಿ, ಲಿಂಗವನಂಗದಮೇಲೆ ಸ್ಥಾಪ್ಯವ ಮಾಡಿದನೆನ್ನ ಗುರು. ಹಿಂದಣ ಜನ್ಮವ ತೊಡೆದು ಮುಂದಣ ಪಥವ ತೋರಿದನೆನ್ನ ತಂದೆ. ಚನ್ನಮಲ್ಲಿಕಾರ್ಜುನನ ನಿಜವನರುಹಿದನೆನ್ನ ಗುರು."

ಅಕ್ಕಗಳಾದರೂ ಅಜ್ಞಾನದ ಸಂಸಾರದಲ್ಲಿ ಸಿಕ್ಕಿ ತೊಳಲುತ್ತಿದ್ದರು. ಅದರ ಬಿಡುಗಡೆಗಾಗಿ ಅಂತಹ ಗುರುವಿನ ಮರೆಹೊಕ್ಕರು. ಮರೆಹೊಕ್ಕ ಮೇಲೆ ಗುರುವು ಏನನ್ನು ಮಾಡಿದನೆಂಬುದನ್ನು ಕ್ರಮವಿಡಿದು ಈ ವಚನದಲ್ಲಿ ಹೀಗೆ ಹೇಳಿಕೊಂಡಿದ್ದಾಳೆ.

"ಶ್ರೀಗುರುಲಿಂಗದೇವರು* ತಮ್ಮ ಹಸ್ತವ ತಂದು ಎನ್ನ ಮಸ್ತ ಕದಮೇಲೆ ಇರಿಸಿದಾಗಳೆ ಎನ್ನ ಭವಂ ನಾಸ್ತಿಯಾಯಿತ್ತು. ಎನ್ನ ತನ್ನಂತೆ ಮಾಡಿದ. ಎನಗೆ ತನಗೆ ತೆರಹಿಲ್ಲದಂತೆ ಮಾಡಿ ತೋರಿ ದನು ನೋಡಾ! ತನ್ನ ಕರಸ್ಥಲದಲ್ಲಿ ಮಹಾಲಿಂಗವನೆನ್ನ ಕರ ಸ್ಥಲದಲ್ಲಿ ಮೂರ್ತಿಗೊಳಿಸಿದ. ಎನ್ನ ಕರಸ್ಥಲದಲ್ಲಿದ್ದ ಮಹಾಲಿಂಗ ವನು ಎನ್ನ ಮನಸ್ಥಲದಲ್ಲಿ ಮೂರ್ತಿಗೊಳಿಸಿದ. ಎನ್ನ ಮನಸ್ಥಲ ದಲ್ಲಿದ್ದ ಮಹಾಲಿಂಗವನು ಎನ್ನ ಭಾವಸ್ಥಲದಲ್ಲಿ ಮೂರ್ತಿಗೊಳಿ ಸಿದ. ಎನ್ನ ಭಾವಸ್ಥಲದಲ್ಲಿದ್ದ ಮಹಾಲಿಂಗವನು ಎನ್ನ ಜ್ಞಾನ

ಸ್ಥಲದಲ್ಲಿ ಮೂರ್ತಿಗೊಳಿಸಿದ. ಎನ್ನ ಜ್ಞಾನಸ್ಥಲದಲ್ಲಿಸ್ಥ ಮಹಾಲಿಂಗವನು ಎನ್ನ ಸರ್ವಾಂಗದೊಳಹೊರಗೆ ತೆರಹಿಲ್ಲದಳವಡಿಸಿದ, ನಮ್ಮ ಶ್ರೀಗುರುಲಿಂಗದೇವ! * ಚನ್ನಮಲ್ಲಿಕಾರ್ಜುನಾ!

ಗುರುವು ತನ್ನ ಭವಭಾರವನ್ನು ಕೆಡಿಸಿ ತನ್ನ ತ್ರಿಕರಣಗಳಲ್ಲಿಯೂ, ಸರ್ವಾಂಗದಲ್ಲಿಯೂ ಮಹಾಲಿಂಗವನ್ನು ಸ್ಥಾಪಿಸಿದನಲ್ಲದೆ ಅದರ ನಿಜವಾದ ನೆಲೆ-ಕಲೆಗಳನ್ನೂ ತಿಳಿಸಿಕೊಟ್ಟನೆಂದು ಹೇಳಿಕೊಂಡಿದ್ದಾಳೆ. ಇಂತಹ ಗುರುವೇ ನಿಜವಾದ ಗುರು. ಹೀಗೆ ಬೋಧಿಸಿದ ಆ ಗುರುವಿನಲ್ಲಿ ಅಕ್ಕನಿಗೆ ನಿಷ್ಠೆಯು ಬಲಿದು ಹೆಚ್ಚಿದೆ. ಆ ನಿಷ್ಠೆಯ ಭರದಲ್ಲಿ—

"ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೇ, ಭವಬಂಧನ ಬಿಡಿಸಿ ಪರಮ ಸುಖವ ತೋರಿದ ಗುರುವೇ, ಭವಿಯೆಂಬುದ ತೊಡೆದು ಭಕ್ತೆಯೆಂದೆನಿಸಿದ ಗುರುವೇ, ಚನ್ನಮಲ್ಲಿಕಾರ್ಜುನನ ತಂದೆನ್ನ ಕೈವಶಕ್ಕೆ ಕೊಟ್ಟ ಗುರುವೇ ಶರಣು."

"ಗುರುವಿನ ಕರುಣದಿಂದ ಲಿಂಗ ಜಂಗಮವ ಕಂಡೆ. ಗುರುವಿನ ಕರುಣದಿಂದ ಪಾದೋದಕ ಪ್ರಸಾದವ ಕಂಡೆ. ಗುರುವಿನ ಕರುಣದಿಂದ ಸಜ್ಜನ ಸದ್ಭಕ್ತರ ಗೋಷ್ಠಿಯ ಕಂಡೆ. ಚನ್ನಮಲ್ಲಿಕಾರ್ಜುನಯ್ಯಾ ನಾ ಹುಟ್ಟಲೊಡನೆ ವಿಭೂತಿಯ ಪಟ್ಟವ ಕಟ್ಟಿ ಸದ್ಗುರುಸ್ವಾಮಿ ಲಿಂಗಸ್ವಾಯತವ ಮಾಡಿದನಾಗಿ ಧನ್ಯಳಾದೆನು."

"ನಿತ್ಯವೆನ್ನ ಮನೆಗೆ ನಡೆದುಬಂದಿತ್ತು, ಮುಕ್ತಿಯೆನ್ನ ಮನೆಗೆ ನಡೆದು ಬಂದಿತ್ತು. ಜಯ ಜಯ ಗುರುವೇ, ನಮೋ ಪರಮಗುರುವೇ ನಮೋ ನಮೋ ಚನ್ನಮಲ್ಲಿಕಾರ್ಜುನನ ತಂದೆನಗೆ ತೋರಿಕೊಟ್ಟ ಗುರುವೇ ನಮೋ ನಮೋ."

---

* ಈ ವಚನದಲ್ಲಿ ಶ್ರೀ ಗುರುಲಿಂಗದೇವನೆಂದು ಎರಡು ಸಲ ಬರುತ್ತದೆ. ಬಹುಮಟ್ಟಿಗೆ ಮಹಾದೇವಿಯಕ್ಕನ ಗುರು ಈತನೆ ಇರಬಹುದೆ?

ಗುರುವನ್ನು ಇನಿತೊಂದು ಅರ್ಥಪೂರ್ಣವಾಗಿ ಭಾವಪರವಶತೆಯಿಂದ ಹೊಗಳಿ ಹಾಡಿದ್ದಾಳೆ. ಗುರುನಿಷ್ಠೆಯಿಲ್ಲದೆ ಗುರುಬೋಧೆಯುಳಪಡದೆ ಇಂತಹ ಮಾತುಗಳು ಎಂದೆಂದಿಗೂ ಬಾರವು; ಬರುವದಿಲ್ಲ. ಅಕ್ಕನ ಈ ನಿಷ್ಠಾಸ್ಫೂರಿತ ವಚನಗಳಿಗೆ ಇನ್ನಾವ ಗುರುಸ್ತುತಿಗಳು ಸರಿಬಾರವು. ಗುರುಸ್ಮರಣೆಗೈಯುವವರು ಅವಶ್ಯವಾಗಿ ಇವನ್ನು ಪಾಠಮಾಡುವಂತಿವೆ.

೨. **ಲಿಂಗ:**— ಇದು ಗುರುವು ಕರುಣಿಸಿ ಕೊಟ್ಟ ಆಧ್ಯಾತ್ಮಿಕ ಸಾಧನದ ಕುರುಹು. ಇದರಿಂದಲೇ ನಮ್ಮ ವ್ಯವಹಾರವೆಲ್ಲವೂ ಪರಿಶುದ್ಧವಾಗುವುದು. ಗುರು ಬೋಧಿಸಿದ ಅರಿವು ಅಳಿಯದೆ ಉಳಿವುದು. ಪ್ರತಿಯೊಂದು ಪದಾರ್ಥವನ್ನು ಲಿಂಗಮುಖಕ್ಕರ್ಪಿಸಿ ಲಿಂಗಾರ್ಪಿತವಾದುವನ್ನು ತೆಗೆದುಕೊಳ್ಳುವದರಿಂದ ಅವುಗಳಲ್ಲಿರುವ ಪದಾರ್ಥಗುಣವು ಹೋಗಿ ಪ್ರಸಾದವಾಗಿ ಪರಿಣಮಿಸುವುದು. ಅದರ ಸ್ವೀಕಾರದಿಂದ ನಮ್ಮಲ್ಲಿ ಅನ್ನದಿಂದುಂಟಾಗುವ ಯಾವ ದುರ್ಗುಣಗಳಿಗೂ, ಕರಣವೃತ್ತಿಗಳಿಗೂ, ಅಜ್ಞಾನಕ್ಕೂ ಎಡೆಯಿರುವದಿಲ್ಲ. ಲಿಂಗಾರ್ಚನೆಯಿಂದ ನಮ್ಮಲ್ಲಿ ಒಂದು ವಿಧವಾದ ಶಾಂತಿ-ಸಮಾಧಾನಗಳು ತಲೆದೋರುವವು; ಆನಂದಸಾಗರವು ಉಕ್ಕುವದು. ತ್ರಿವಿಧ ಲಿಂಗಾರ್ಚನೆಯಿಂದ ತ್ರಿವಿಧ ಕರಣಗಳ ತ್ರಿವಿಧ ಮಲಗಳು ದೂರಾಗುವವು ಅದುಕಾರಣ ಲಿಂಗವೆಂದರೆ ಎಲ್ಲ ಅವಗುಣಗಳನ್ನು ಕಳೆದು, ಪ್ರತಿಪದಾರ್ಥವನ್ನು ಪರಿಶುದ್ಧಗೊಳಿಸುವ ಶೋಧಕನು.

ಅಕ್ಕನು ಅಂತಹ ಲಿಂಗದ ನೆಲೆ-ಕಲೆಗಳನ್ನು ಅರಿತು ವ್ಯಾಪಕವಾದ ಸರ್ವಭರಿತವಾದ ಮಹಾಲಿಂಗವು ತನ್ನ ಕರಸ್ಥಲಕ್ಕೆ ಬಂದ ಪರಿಯನ್ನು ಹೀಗೆ ಬಣ್ಣಿಸಿದ್ದಾಳೆ.

> "ಅಯ್ಯಾ ಪಾತಾಳವಿತ್ತಿತ್ತ, ಶ್ರೀಪಾದವತತ್ತ. ಬ್ರಹ್ಮಾಂಡವಿತ್ತಿತ್ತ, ಮಣಿಮುಕುಟವತತ್ತ. ಅಯ್ಯಾ ದಶದಿಕ್ಕು ಇತ್ತಿತ್ತ, ದಶಭುಜಗಳತ್ತತ್ತ. ಚನ್ನಮಲ್ಲಿಕಾರ್ಜುನಯ್ಯ ನೀನೆನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ."

ವೃಕ್ಷದಿಂದ ಬೀಜವು ಹುಟ್ಟಿ ಆ ವೃಕ್ಷವು ಮರಳಿ ಬೀಜದಲ್ಲಿ ಅಡಗುವಂತೆ ಲಿಂಗವಂತರು ಲಿಂಗದಿಂದಲೇ ಹುಟ್ಟಿ ಲಿಂಗದಲ್ಲಿಯೇ ಐಕ್ಯರಾಗುವರು. ಇವರು ಸದಾ ಶುಚಿಗಳು, ಸದಾ ಸನ್ನಿಹಿತರು. ಇವರ ಚರಿತೆಯು ಅನನ್ಯ ಸಾಧಾರಣವಾದುದು ಎಂಬುದನ್ನು ಅಕ್ಕಗಳು ಮುಂದಿನ ವಚನದಲ್ಲಿ ಪ್ರಕಟಿಸಿದ ರೀತಿಯನ್ನು ನೋಡಿ!

> "ಲಿಂಗದಿಂಪುದಿಸಿ, ಲಿಂಗವಿಡಿದಿಪ್ಪ ಪುರಾತನರ ಇಂಗಿತವೇನೆಂದು ಬೆಸಗೊಂಬಿರಯ್ಯಾ? ಅವರ ನಡೆಯೇ ಆಗಮ. ಅವರ ನುಡಿಯೇ ವೇದ. ಅವರು ಲೋಕದ ಮಾನವರೆಂದೆನ್ನಬಹುದೆ? ಅದೆಂತೆಂದೊಡೆ.

॥ಶ್ಲೋಕ॥ ವೃಕ್ಷಾದ್ಭವಂತಿ ಬೀಜಾನಿ ತದ್ವೃಕ್ಷೋ ಲೀಯತೇ ಪುನಃ।
ರುದ್ರಲೋಕಂ ಪರಿತ್ಯಕ್ತ್ವಾ ಶಿವಲೋಕೇ ಭವಿಷ್ಯತಿ॥

> ಎಂಬುದಾಗಿ ಅಂಕೋಲೆಯ ಬೀಜದಿಂದಾಯಿತ್ತು ವೃಕ್ಷವು. ಆ ವೃಕ್ಷವು ಮರಳಿ ಬೀಜದೊಳಡಗಿತ್ತು. ಆ ಪ್ರಕಾರದಿಂ ಲಿಂಗದೊಳಗಿದ್ದ ಪುರಾತನರು ಉದ್ಭವಿಸಿದರು. ಮರಳಿ ಆ ಪುರಾತನರು ಆ ಲಿಂಗದೊಳಗೆ ಬೆರಸಿದರು ನೋಡಿರಯ್ಯಾ. ಇಂತಪ್ಪ ಪುರಾತನರಿಗೆ ನಾನು ಶರಣೆಂದು ಹುಟ್ಟುಗೆಟ್ಟೆನಯ್ಯಾ ಚೆನ್ನಮಲ್ಲಿಕಾರ್ಜುನಾ."

ಲಿಂಗವಂತರ ಸೃಷ್ಟಿ ಸ್ಥಿತಿ ಲಯಗಳು ಲಿಂಗಮಯವಾಗಿವೆಯೆಂಬುದೇ ಇವರ ತಾತ್ಪರ್ಯ. ಇದು ಇವರ ಬರೀ ಹೇಳಿಕೆಯಲ್ಲ. ಬಳಿಕೆಯಲ್ಲಿಯೂ ಬಂದಿದ್ದಿತು. **ಲಿಂಗೋದ್ಭವ, ಲಿಂಗಭೋಗೋಪಭೋಗಿ, ಲಿಂಗೈಕ್ಯ**ವೆಂದು ಕ್ರಮವಾಗಿ ಬಳಿಕೆಯಲ್ಲಿ ಹೇಳಿಕೊಳ್ಳುವುದೇ ಇದಕ್ಕೆ ಸಾಕ್ಷಿ. ತಾತ್ವಿಕವಾದ ಈ ಮಾತುಗಳನ್ನು ಇತ್ತೀಚಿಗೆ ಕೆಲವರು ವ್ಯಾವಹಾರ್ಯವಾಗಿ ಉಪಯೋಗಿಸುತ್ತಿರುವುದು ಶೋಚನೀಯವಾದ ಮಾತಾಗಿದೆ.

"ಲಿಂಗಸುಖಸಂಗದಲ್ಲಿ ಮನವೇದ್ಯವಾಯಿತ್ತು. ಇನ್ನೆಲ್ಲಿಯ ದಯ್ಯಾ ಎನಗೆ ನಿಮ್ಮಲ್ಲಿ ನಿರವಯವು? ಇನ್ನೆಲ್ಲಿಯದಯ್ಯಾ ನಿಮ್ಮಲ್ಲಿ ಕೂಡುವುದು? ಪರಮಸುಖ ಪರಿಣಾಮ ಮನಮೀರಿ ದಪ್ಪಿ ನಾನು ನಿಜವನ್ನೆದುವುದು ಹೇಳಾ ಚನ್ನಮಲ್ಲಿಕಾರ್ಜುನಯ್ಯಾ?

ಇನಿತೊಂದು ಅಕ್ಕನಿಗೆ ಲಿಂಗದಲ್ಲಿ ನಿಷ್ಠೆಯು ಬಲಿತು ಕರಿಗೊಂಡಿದ್ದಿತು.

೩. **ಜಂಗಮ:**—ಜಂಗಮವು ವೀರಶೈವರ ಚರಲಿಂಗ; ಅಚರ ಲಿಂಗದ ಮುಖ. ಲಿಂಗವಂತನು ಏನನ್ನರ್ಪಿಸಬೇಕಾದರೂ ಇಲ್ಲಿಯೆ. ತಾನು ಉದ್ಧಾರನಾಗಬೇಕಾದರೂ ಈತನಿಂದಲೆ. ಶರಣನು ಗುರು ಬೋಧೆಯನ್ನು ಹೊಂದಿ ಲಿಂಗಾಂಗನಾಗಿ, ಮಾಂಸಪಿಂಡವಳಿದು ಮಂತ್ರ ಪಿಂಡನಾಗಿ, ಪರಿಸುದ್ಧ ಹೃದಯನಾಗಿ ಜಂಗಮಲಿಂಗಕ್ಕೆ ಮರೆಹೋಗ ಬೇಕು. ಹೀಗೆ ಶರಣಾಗತನಾದ ಶಿಷ್ಯನನ್ನು ತನ್ನಂತೆ ಮಾಡಿಕೊಂಡು ಉದ್ಧರಿಸುವವನೇ ಜಂಗಮನು. ಜಂಗಮನ ಕರ್ತವ್ಯವು ಕೇವಲ ಉದ್ಧರಿಸುವುದೊಂದೇ. ಅದರಿಂದ ಆತನು ಉದ್ಧಾರಕನು.

ಅಕ್ಕನು ಜಂಗಮತತ್ವವು ಇಂತಹದೆಂದು ಅರಿತಿದ್ದಳು. ಆದುದರಿಂದ ಜಂಗಮಾರ್ಚನ-ಜಂಗಮ ದರ್ಶನವೆಂದರೆ ಅವಳಿಗೆ ಹೆಚ್ಚಿನ ಮೆಚ್ಚಿಗೆ.

"ಜಂಗಮವೆನ್ನ ಪ್ರಾಣ. ಜಂಗಮವೆನ್ನ ಜೀವ. ಜಂಗಮವೆನ್ನ ನಿಧಿನಿಧಾನ. ಜಂಗಮವೆನ್ನ ಪುಣ್ಯದ ಫಲ ಜಂಗಮವೆನ್ನ ಹರುಷದ ಮೇರೆ. ಚನ್ನಮಲ್ಲಿಕಾರ್ಜುನಾ ಜಂಗಮದ ತಿಂಥಿಣಿಯಲ್ಲಿ ಓಲಾಡುವೆ"

ಎಂದು ಬೀಗಿ ಬಗೆದುಂಬಿ ಬಣ್ಣಿಸುವಷ್ಟು ಜಂಗಮದಲ್ಲಿ ಅಕ್ಕನು ನಿಷ್ಠೆಯನ್ನು ಇಟ್ಟುಕೊಂಡಿದ್ದಳು.

೪. ಭಸ್ಮ:—ಲಿಂಗಾಂಗಿಯ ಸಾಧನ ಸಂಪತ್ತಿನಲ್ಲಿ ಇದು ಮೊದಲನೆಯದು. ಲಿಂಗವಂತರು ಇದನ್ನು 'ಐಶ್ವರ್ಯ'ವೆಂದು ಕರೆಯುವಷ್ಟು ಇದರಲ್ಲಿ ಶ್ರದ್ಧೆಯನ್ನಿಟ್ಟುಕೊಂಡಿದ್ದಾರೆ. ಇದು ಸಾಮಾನ್ಯವಾದುದಲ್ಲ. ಇದು ಸಾಕ್ಷಾತ್ ಶಿವನ ದಿವ್ಯ ಬೆಳಗು. ಇದರಿಂದ ಸಕಲಪಾಪಗಳು ಪಲ್ಲಟವಾಗುತ್ತವೆ. ಕಷ್ಟ-ಸಂಕಟಗಳು ದೂರಾಗುತ್ತವೆ. ರೋಗ-ರುಜುಗಳು ಬಹುಮಟ್ಟಿಗೆ ಇಲ್ಲದಂತಾಗುತ್ತವೆ. ಇದು ಎಲ್ಲ ಸುಖಸೌಭಾಗ್ಯಗಳನ್ನು ಒದಗಿಸಿಕೊಡುತ್ತದೆ. ಇದನ್ನು ಧರಿಸಿದ ಮೇಲೆ ವಿಷಯಸ್ಪರ್ಶಜನ್ಯ ಸುಖಕ್ಕೆ ಮನ್ನಣೆ ಕೊಡಲಾಗದು. ಅವುಗಳ ಆ ಸ್ಪರ್ಶಸುಖವು ಇದರ ಮುಂದೆ ಕರ್ಕಶವಾಗಿ ಪರಿಣಮಿಸಬೇಕು. ಇಂದ್ರಿಯಗಳ ಪರಿದಾಟವು ಉಡುಗಿಹೋಗಬೇಕು. ಇದು ವಿಭೂತಿ–ಭಸಿತ–ಭಸ್ಮ–ಕ್ಷಾರ–ರಕ್ಷೆ ಎಂಬುದಾಗಿ ಐದು ಹೆಸರನ್ನಾಗಿರುವುದು. ಎಲ್ಲದರಲ್ಲಿ ಒಂದೊಂದು ವಿಧವಾದ ಮಹಾತ್ಮ್ಯವಿದೆ. ಅನುಭಾವಿಗಳು ಭಸ್ಮೋತ್ಪತ್ತಿಯಲ್ಲಿ ಕಲ್ಪ-ಅನುಕಲ್ಪ-ಉಪಕಲ್ಪ-ಅಕಲ್ಪವೆಂದು ನಾಲ್ಕು ಬಗೆಯೆಂದು ಹೇಳುತ್ತಾರೆ. ಅವುಗಳಲ್ಲಿ ಮೊದಲನೆಯದೇ ಸರ್ವೋತ್ತಮವಾದುದು. ಭಸ್ಮವನ್ನು ಯಾರು ಧರಿಸಿದರೂ ಅವರು ಎಲ್ಲ ಪಾಪಂಗಳಿಂದ ಬಿಡುಗಡೆಯನ್ನು ಹೊಂದುತ್ತಾರೆ. ಇಂತಹ ಪವಿತ್ರ್ಯಮಯವಾದ ಭಸಿತವನ್ನು ಅಕ್ಕನು ಧರಿಸಿ ವಿಷಯಸಂಗವನ್ನು ಬಿಟ್ಟಿದ್ದಳು. ಬಟ್ಟೆಬರೆಗಳನ್ನೂ ಸಹ ತೊಡದಿದ್ದಳು. ಅವಳಿಗೆ ಅದರಲ್ಲಿ ಅಂತಹ ದಿವ್ಯ ಶಕ್ತಿಯು ಅಭಿವ್ಯಕ್ತವಾಗಿದ್ದಿತು; ಅನುಪಮವಾದ ಆನಂದವು ತಲೆದೋರಿದ್ದಿತು. ಎಂದು ಹೇಳುವ ನನ್ನೀ ಮಾತಿಗೆ ಅವಳ ಈ ವಚನವೇ ಸಾಕ್ಷಿ.

"ಹಿತವಿದೆ. ಸಕಲಲೋಕದ ಜನಕ್ಕೆ ಮತವಿದೆ. ಶೃತಿಪುರಾಣದ ಗತಿಯಿದೆ. ಭಕುತಿಯ ಬೆಳಗಿನ ಉನ್ನತಿಯಿದೆ. ಶ್ರೀ ವಿಭೂತಿ ಒಲಿದೊಲಿದು ಧರಿಸಿರೆ, ಭವವನು ಪರಿವುದು. ದುರಿತಸಂಕುಳವ ತೊರಿಸುವುದು. ಪರನ ಸಾಲೋಕ್ಯ ಸಾಮೀಪ್ಯದಲ್ಲಿರಿಸುವುದು. ನಿರುತವಿದನೇ ನಂಬು ಮನುಜಾ. ಜವನ ಭೀತಿ ಮರಣ ಭಯದಿಂದ ಈ ವಿಭೂತಿಯ ಅಗಸ್ತ್ಯ, ಕಶ್ಯಪ, ಜಮದಗ್ನಿಗಳು ಧರಿ

ಸುವರು ನೋಡಾ ! ಶ್ರೀಶೈಲಮಲ್ಲಿಕಾರ್ಜುನನೊಲಿಸುವ ಶ್ರೀ ವಿಭೂತಿ "

೫. ರುದ್ರಾಕ್ಷಿ:— ಇದು ಎರಡನೆಯ ಸಾಧನವು. ಇದನ್ನು ಧರಿಸುವುದು ಅಲಂಕಾರಕ್ಕಾಗಿ ಅಲ್ಲ, ಅಲಂಕಾರಗಳನ್ನು ತ್ಯಜಿಸುವದಕ್ಕಾಗಿ. ಕಾಯ್ದೊಡಿಗೆ (ರುದ್ರಾಕ್ಷಿ) ಯನ್ನು ಧರಿಸಿದ ಶರಣಸತಿಯು ಹೊಂದೊಡಿಗೆಗೆ ಹರಿಯಬಾರದು. ಹೊಂದೊಡಿಗೆಗಳು ಕಾಲ-ಕಾಮರ ಕಾಟಕ್ಕೊಳಗಾದ ಗಂಡರನ್ನು ಮೆಚ್ಚಿಸತಕ್ಕವು. ಕಾಯ್ದೊಡಿಗೆಗಳು ಮಾತ್ರ ಕಾಮಾರಿಯಾದ ಕಾಲಾರಿಯಾದ ಶಿವನನ್ನು ಒಲಿಸತಕ್ಕವುಗಳು. ಆದುದರಿಂದ ಶರಣನು ರುದ್ರಾಕ್ಷಿಗಳನ್ನು ಧರಿಸಿದ ಮೇಲೆ ಈತನ ಅಕ್ಷ-ಅಕ್ಷಿಗಳು ರುದ್ರನಲ್ಲಿಯೇ ಇರಬೇಕು. ಅಕ್ಕನ ಒಲವು ಹೀಗಾಗಿದ್ದಿತು. ಆದುದರಿಂದ "ರುದ್ರಾಕ್ಷಿಯೇ ವೈದೊಡಿಗೆ ಎನಗೆ" ಎಂದು ನಿಷ್ಠೆಯಿಂದ ನುಡಿದಿದ್ದಾಳೆ.

೬. ಮಂತ್ರ:—ಇದು ಕೊನೆಯ ಸಾಧನ 'ಓಂ ನಮಃ ಶಿವಾಯ' ಎಂಬುದೇ ಮಂತ್ರ. ಇದು ಪರಾತ್ಪರನಾದ ಶಿವನ ವಾಚಕ. ಪತಿವ್ರತೆಗೆ ತನ್ನ ಗಂಡನ ಹೆಸರು ಹೆಚ್ಚು ಪ್ರಿಯವಾದಂತೆ, ಶರಣಸತಿಗೆ ಆ ಶಿವನ ಷಡಕ್ಷರಿ ಮಂತ್ರವು ಒಳ್ಳೇ ಪ್ರಿಯವಾದುದು. ಪತಿವ್ರತೆಯು ತನ್ನ ಪತಿಯ ಹೆಸರನ್ನು ಹೇಗೆ ಹೆಚ್ಚಾಗಿ ವಾಚಕವಾಗಿ ಬಳಸುವದಿಲ್ಲವೋ ಹಾಗೆ ಶಿವಶರಣನು ಮಂತ್ರವನ್ನು ವಾಚಕವಾಗಿ ಸಿಕ್ಕಲ್ಲಿ ಬಳಸುವದಿಲ್ಲ. ಯಾವುದನ್ನು ಎಷ್ಟು ಮುಚ್ಚಿಡುವೆವೋ ಅದರಲ್ಲಿ ಅಷ್ಟು ಆದರ ಹೆಚ್ಚುತ್ತದೆ ಗಂಡನ ಹೆಸರಿನಲ್ಲಿ ಹೆಂಡತಿಗೆ ಯಾವ ಆನಂದವಾಗುವದೋ ಶರಣನಿಗೆ ಆ ಪರಶಿವನ ಷಡಕ್ಷರಿ ಮಂತ್ರದಲ್ಲಿ ಅದಕ್ಕಿಂತಲೂ ನೂರ್ಮಡಿ ಸಾಸಿರ ಮಡಿ ಹೆಚ್ಚು ಆನಂದವೆನಿಸುತ್ತದೆ. ಆದುದರಿಂದ ಬಹಿರ್ಮಂತ್ರಗಳು ಬೇಕಾದಷ್ಟಿದ್ದರೂ ಮೂಲಮಂತ್ರವಾದ ಷಡಕ್ಷರಿಯಷ್ಟು ಬೆಲೆಬಾಳಲಾರವು ಶಿವವಾಚಕವಾದ ಆ ಮಂತ್ರವು ಚಿಕ್ಕದಾದರೂ ಪರ್ವತದಂತಹ ಪಾಪವನ್ನೂ ಪರಿಹರಿಸಬಲ್ಲುದು.

"........ದುರಿತವ ಪರಿಹರಿಸಬಲ್ಲವೆ, ಓಂ ನಮಃಶಿವಾಯ ಶರಣೆಂಬುದೇ ಮಂತ್ರ. ನಮಃಶಿವಾಯೇತಿ ಮಂತ್ರ "ಯಃಕರೋತಿ ತ್ರಿಪುಂಡ್ರಕಂ। ಸಮಸ್ತ ಜನ್ಮ ಕೃತಂ ಪಾಪಂ ತಕ್ಷಣಾದೇವ ವಿನಶ್ಯತಿ॥" ಎಂಬುದಾಗಿ ಹಿಂಹದ ಮರಿಯ ಸೀಳ್ನಾಯಿ ತಿಂಬರೆ, ಭಂಗವಿಸ್ಮಾರದೋ ಚನ್ನಮಲ್ಲಿಕಾರ್ಜುನಾ"

"ಏಳು ಕೋಟಿ ಮಹಾಮಂತ್ರ. ಉಪಮಂತ್ರಗಳಿಗೆ ಲೆಕ್ಕವಿಲ್ಲ. "ಚಿತ್ತವ್ಯಾಕುಳನಾಗಿ ಭ್ರಮಿಸದಿರಾ ಎಲೆ ಮನವೇ! ಶಿವ ಶಿವಾ ಎಂದಡೆ ಸಾಲದೆ?......ಎನಗಿದೇ ತಂತ್ರ, ಎನಗಿದೇ ಮಂತ್ರ. ಎನಗಿದೇ ಗತಿ ಮತಿ ಚೈತನ್ಯವಯ್ಯಾ ಸದ್ಗುರು ಚನ್ನಮಲ್ಲಿಕಾರ್ಜುನ ತೋರಿದ ಎನಗಿದೇ ಸಹಜ ಮಂತ್ರ"

ಎಂದು ಅಕ್ಕನು ಗಾಢವಾದ ತನ್ನ ಮಂತ್ರಶ್ರದ್ಧೆಯನ್ನು ತೋರ್ಪಡಿಸಿದ್ದಾಳೆ.

**೭. ಪಾದೋದಕ:—** ಇದು ಫಲಗಳಲ್ಲಿ ಒಂದು. ಇದು ಪರಮ ಪಾವನವಾದುದು; ಜೀವನಾಧಾರವಾದುದು. ನೀರು, ಬೇಸಿಗೆಯಿಂದ ಬಳಲಿದವನ ಬಾಯಾರಿಕೆಯನ್ನು ಕಳೆಯುವಂತೆ, ಪಾದೋದಕವು ಭವದ ಬೇಗೆಯಿಂದ ಬೆಂದವನ ಬಾಯಾರಿಕೆಯನ್ನು ತೊಲಗಿಸುತ್ತದೆ. ಎಲ್ಲ ಪುಣ್ಯತೀರ್ಥಗಳ ಪಾವಿತ್ರತೆಯು ಈ ಪಾದತೀರ್ಥದಲ್ಲಿದೆ. ಪುಣ್ಯದ ಹಂಬಲುಳ್ಳವನು ಪಾದತೀರ್ಥವನ್ನು ಸಲ್ಲಿಸಿದರೆ ಆಯಿತು. ಆತನು ಬೇರೆಯಾವ ತೀರ್ಥಕ್ಕೂ ಅಲೆಯುವ ಅವಶ್ಯವಿಲ್ಲ.

"ಅಯ್ಯಾ ಪರಾತ್ಪರ ಸತ್ಯಸದಾಚಾರ ಗುರುಲಿಂಗ ಜಂಗಮದ ಶ್ರೀಚರಣವನ್ನು ಹಿಂದೆ ಹೇಳಿದ ಅಚ್ಚಪ್ರಸಾದಿಯೋಪಾದಿಯಲ್ಲಿ ನಿರ್ವಂಚಕತ್ವದಿಂದ ಗುರುಲಿಂಗ ಜಂಗಮಕ್ಕೆ ಅರ್ಥಪ್ರಾಣಾಭಿಮಾನವ ಸಮರ್ಪಿಸಿ ಒಪ್ಪುತ್ತ ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ ಪಾದಾರ್ಚನೆಯ ಮಾಡಿ ಪಾದೋದಕ ಪ್ರಸಾದವನ್ನು ತನ್ನ ಸರ್ವಾಂಗದಲ್ಲಿ ನೆಲಸಿಪ್ಪ ಇಷ್ಟಮಹಾಲಿಂಗ ದೇವಂಗೆ ಕೊಟ್ಟು ಕೊಂಬುವಂಥಾದ್ದೇ ಇದಿರಿಟ್ಟ ಜಂಗಮ ಪಾದೋದಕ ಪ್ರಸಾದವ ಕೊಂಬ ಆಚರಣೆಯ ನಿಲುಕಡೆಯ ನೋಡಾ......"

ಪ್ರಸಾದಿಸ್ಥಲದಲ್ಲಿದ್ದ ಈ ವಚನವನ್ನು ಅವಳ ವಚನದಲ್ಲಿಯೇ ಸಂಪೂರ್ಣವಾಗಿ ಓದಿ ಗುರುಲಿಂಗಜಂಗಮ ಪಾದೋದಕದಲ್ಲಿದ್ದ ಅವಳ ಅನುಭಾವ ನಿಷ್ಠೆಗಳನ್ನು ಕಂಡುಕೊಳ್ಳಬಹುದು.

೮. **ಪ್ರಸಾದ:**— ಮನಸ್ಸಿನ ಪ್ರಸನ್ನತೆಗೆ ಪ್ರಸಾದವೇ ಮೂಲ ಕಾರಣ. ಹಸಿದವನು ಅನ್ನವನ್ನು ಉಂಡು ಕ್ಷಣಿಕತೃಪ್ತಿಯನ್ನು ಪಡೆಯುವಂತೆ, ಆಧ್ಯಾತ್ಮಿಕ ಹಸಿವುಳ್ಳವನು ಪ್ರಸಾದವನ್ನು ಸ್ವೀಕರಿಸಿ ಎಂದೂ ಅಳಿಯದ ಆತ್ಮತೃಪ್ತಿಯನ್ನು ಪಡೆಯುತ್ತಾನೆ. ಪ್ರಸಾದವು ಹಸಿವಿಗಾಗಿಯಲ್ಲ, ಆತ್ಮಶಾಂತಿಗಾಗಿ. ಪ್ರಸಾದವು ಬಯಸಿ ಬರುವ ಫಲವಲ್ಲ, ಪೂಜೆಯಿಂದ ತಾನಾಗಿಬರುವ ನಿಷ್ಕಾಮಫಲ. 'ಕಾಯ ಸೂತಕ ಹೋಯಿತ್ತು ನಿಮ್ಮ ಒಕ್ಕುದಕೊಂಡೆನಾಗಿ' 'ಪ್ರಸಾದವಿಕಾರಿಗೆ ಮನವಿಕಾರವೆಂಬುದಿಲ್ಲ.' ಎಂದು ಶರಣರು ಹೇಳಿದ್ದಾರೆ.

ಪ್ರಸಾದವು ಶುದ್ಧ-ಸಿದ್ಧ-ಪ್ರಸಿದ್ಧವೆಂದು ಮೂರುತೆರನಾಗಿರುವುದು. ಅವನ್ನು ಕ್ರಮವಾಗಿ ಗುರು-ಲಿಂಗ-ಜಂಗಮಕ್ಕೆ ಅರ್ಪಿಸಿ ಸ್ವೀಕರಿಸಬೇಕು ರೂಪು-ರುಚಿ-ತೃಪ್ತಿಗಳನ್ನು ಇಷ್ಟ-ಪ್ರಾಣ-ಭಾವಲಿಂಗಗಳಿಗೆ ಸಮರ್ಪಿಸಬೇಕು. ಹಾಗೆ ಸಮರ್ಪಿಸಿ ಸ್ವೀಕರಿಸಿದವನ ಅಂಗವೆಲ್ಲ ಪ್ರಸಾದಮಯವಾಗಿ ಹೋಗುವುದು; ಮನ-ಭಾವಗಳು ಪ್ರಸನ್ನಮಯವಾಗುವವು.

> "ಕಾಯಪ್ರಸಾದವೆನ್ನ. ಜೀವಪ್ರಸಾದವೆನ್ನ ಪ್ರಾಣಪ್ರಸಾದವೆನ್ನ.
> ಭಾವಪ್ರಸಾದವೆನ್ನ. ಸುಯಿಧಾನ ಪ್ರಸಾದವೆನ್ನ. ಸಮಯ
> ಪ್ರಸಾದವೆನ್ನ. ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಪ್ರಸಾದವ
> ಹಾಸಿ ಹೊದೆದುಕೊಂಡಿಪ್ಪೆನು"

ಎಂಬುದು ಅಕ್ಕನ ಪ್ರಸಾದ ನಿಷ್ಠೆ. ಹೀಗೆ ಅಕ್ಕನು ಅಷ್ಟಾವರಣಗಳಲ್ಲಿ ನಿಷ್ಠೆಯನ್ನಿಟ್ಟುಕೊಂಡು ಅವನ್ನೇ ಅಂಗವನ್ನಾಗಿ ಮಾಡಿಕೊಂಡಿದ್ದಳು.

ಅಕ್ಕನಿಗೆ ಅಷ್ಟಾವರಣವು ಅಂಗವಾಗಿದ್ದಂತೆ ಪಂಚಾಚಾರವೂ ಅವಳಿಗೆ ಪ್ರಾಣವಾಗಿದ್ದಿತು. ಯಾವ ಆಚಾರವನ್ನೂ ಅವಳು ಮೀರಿ

ವರ್ತಿಸಲಿಲ್ಲ. ಲಿಂಗ-ಜಂಗಮಾಭಿಮಾನದಿಂದ ಲಿಂಗಾಚಾರಿಯಾಗಿದ್ದಳು ಸಹಜವೃತ್ತಿ, ಸತ್ಯಕಾಯಕಗಳಿಂದ ಸದಾಚಾರಿಯಾಗಿದ್ದಳು. ಶರಣರನ್ನು ಸತ್ಪುರುಷರನ್ನು ಶಿವಾಂಶಿಕರೆಂದು ಭಾವಿಸಿ ಶಿವಾಚಾರಿಯಾಗಿದ್ದಳು. ಗುಣಗ್ರಾಹಿಯಾಗಿ ಗಣ್ಯರಾದ ಗುರು–ಲಿಂಗ–ಜಂಗಮ ನಿಂದೆಯನ್ನು ಸಹಿಸದೆ ಗಣಾಚಾರಿಯಾಗಿದ್ದಳು. ಜಾತಿಸೂತಕಗಳನಳಿಸಿ, ಕುಲಗೋತ್ರಗಳ ತ್ಯಜಿಸಿ ಗುರು-ಲಿಂಗ-ಜಂಗಮರಸಂಗ ಶುಶ್ರೂಷೆಗಳಿಂದ ಭೃತ್ಯಾಚಾರಿಯೂ ಆಗಿದ್ದಳು.

ಇದಲ್ಲದೆ ಇವಳು ಷಟ್‌ಸ್ಥಲದಲ್ಲಿ ಪರಮಜ್ಞಾನಿಯೂ ಆಗಿದ್ದಳು. ಇವಳ ಈ ಜ್ಞಾನವನ್ನು ನಾವು ಅರಿಯಬೇಕಾದರೆ ಸ್ಥಳಕಟ್ಟನವೋಲೆ ವಿವರಿಸಿ ಬರೆದ ಅವಳ ವಚನವನ್ನೇ ಓದಬೇಕು. 'ಅಕ್ಕನ ಷಟ್‌ಸ್ಥಲ ಜ್ಞಾನ'ವೆಂಬ ಒಂದು ಪ್ರಕರಣವನ್ನು ಇಲ್ಲಿ ಬರೆಯಬೇಕಾಗಿತ್ತು. ಆದರೆ ಅದು ಅವಳ ವಚನದಲ್ಲಿಯೇ ಸ್ವಾರಸ್ಯವಾಗಿಯೂ ರಹಸ್ಯಪೂರ್ಣವಾಗಿಯೂ ಪ್ರತಿಪಾದಿತವಾಗಿರುವದರಿಂದ ಅದನ್ನೇ ಪುನಃ ನನ್ನ ನೀರಸವಾದ ಮಾತುಗಳಲ್ಲಿ ಬರೆವುದು ಅನುಚಿತವೆಂದು ಕೈಬಿಟ್ಟಿದ್ದೇನೆ.

---

## ಅಕ್ಕನ ಕಾವ್ಯ ಜೀವನ.

ಹೀಗೆ ಅಕ್ಕನು ನಡೆದುಹೋದ ಬಟ್ಟೆಯು ನಮಗೆ ಆದರ್ಶವಾಗಿದ್ದಂತೆ, ಅವಳು ನುಡಿದ ಭಾಷೆಯೂ ಆದರ್ಶವಾಗಿದೆ, ಚಿತ್ತಾಕರ್ಷಕವಾಗಿದೆ, ಭಾವಪೂರ್ಣವಾಗಿದೆ. ಆದುದರಿಂದ ಅದನ್ನು ಕಣ್ಮರೆಮಾಡಿ ಮುಂದಕ್ಕೆ ಹೋಗುವಂತಿಲ್ಲ.

ಸ್ವಾರ್ಥಸಂಕುಚಿತಗಳಿಂದ, ವಿಷಯ ವ್ಯಾಮೋಹಗಳಿಂದ ಸಂಕುಚಿತವಾಗದ, ವ್ಯಾಪಕವಾದ-ವ್ಯಾಮೋಹ ರಹಿತವಾದ ಉಚ್ಚ ಜೀವನದಲ್ಲಿ ಒಂದು ಅಮೋಘವಾದ ಆತ್ಮಶಕ್ತಿಯು ತಲೆದೋರುತ್ತದೆ. ಆ ಆತ್ಮಶಕ್ತಿಯೇ ಅಮರವಾದ ಕವಿವಾಣಿಯಾಗಿ ಹೊರಹೊಮ್ಮುತ್ತದೆ. ಅಂತಹ ಕವಿವಾಣಿಯೇ ಭಾವಪೂರ್ಣವಾಗುತ್ತದೆ; ಜನಜೀವನಕ್ಕೆ ಆದರ್ಶವಾಗುತ್ತದೆ. ಅದು ಜನಮನವನ್ನು ತನ್ನತ್ತ ಸೆಳೆದು ಉಚ್ಚ ಹೊಸ ಜೀವನದಲ್ಲಿ ಇರಿಸುತ್ತದೆ. ಅದರಿಂದ ಆತ್ಮಯೋಜನೆ-ಆನಂದಯಾಚನಗಳಿಗೆ ಅವರವರ ಅಂತರಂಗಗಳು ಎಡೆಯಾಡುತ್ತವೆ. ಮನಸ್ಸಿನ ವೃತ್ತಿಗಳೆಲ್ಲಾ ಮಾರ್ಪಟ್ಟು ಚೇತರಿಸಿಕೊಳ್ಳುತ್ತವೆ. ಹೀಗೆ ಜನಾಂಗದ ಜೀವನವನ್ನು ಮಾರ್ಪಡಿಸುವುದೇ ಮಹಾಕಾವ್ಯ. ಆ ಕಾವ್ಯದ ಬೆಳಸು ಹೆಚ್ಚೆಳಸಾಗುತ್ತದೆ. ಕೀರ್ತಿ ಫಲವು ಅದನ್ನು ತಬ್ಬಿಕೊಳ್ಳುತ್ತದೆ. ಅಂತಹ ಕಾವ್ಯವನ್ನು ಕಟ್ಟುವವನೇ ನಿಜವಾದ ಕವಿ, ಮಹಾಕವಿ. ಆತನೇ ಋಷಿಕವಿ. ಆಗ "ನಾ ಋಷಿಃ ಕುರುತೇ ಕಾವ್ಯಂ" ಎಂಬ ಆತ್ಮವೀರ ಕವಿಗಳ ಅಮರ ವಾಣಿಯು ಆನಸಿಗೆ ಒರೆಗಲ್ಲಾಗಿ ನಿಲ್ಲುತ್ತದೆ.

ನಮ್ಮ ಅಕ್ಕನು ಈ ಪಂಕ್ತಿಗೆ ಸೇರಿದವಳು. ಅವಳು ಮಹಾಋಷಿ ಕವಯಿತ್ರಿ. ತನ್ನ ಕಾವ್ಯವಾಣಿಯಿಂದ ಜನರ ಹೃದಯವನ್ನು ಆಕರ್ಷಿಸುವ ಉದ್ದಾಮ ಕವಿಗಳ ಪಂಕ್ತಿಯಲ್ಲಿ ಅಕ್ಕನಿಗೂ ಒಂದು ಸ್ಥಾನವಿದೆ. ಅದರ ಜೊತೆಗೆ ಆಧ್ಯಾತ್ಮಿಕದ ಆಳವಾದ ತಿಳಿವನ್ನು ತಿಳಿಸುವ ಋಷಿಕವಿಗಳಲ್ಲಿಯೂ ಒಂದು ಮಾನ್ಯತೆಯಿದೆ. ಏಕೆಂದರೆ ಅಕ್ಕನ ಗ್ರಂಥಗಳು ಕೇವಲ ಶಾಬ್ದಿಕ ರಮ್ಯತೆಯಿಂದೊಡಗೂಡದೆ ಹಾರ್ದಿಕ ರಮ್ಯತೆಯಿಂದಲೂ ಕೂಡಿವೆ. ಅವು ಅವಳು ಸರಸ್ವತಿಯ ಸೇವೆಯನ್ನು ಮಾಡಬೇಕೆಂದು ಭಾವಿಸಿ ಹೋಗೋ ಬರೆದ ಗ್ರಂಥಗಳಲ್ಲ. ಅವಳ ಹೃದಯವುಕ್ಕಿ ಸೂಸಿ ಹರಿದುಬಂದವುಗಳು. ಆದುದರಿಂದ ಅವಳು ಅವುಗಳಲ್ಲಿ ಪ್ರತಿಪಾದಿಸುವುದು ಕೇವಲ ಜೀವಜೀವರ ಅಲ್ಪಸುಖವನ್ನಲ್ಲ, ದೇವಜೀವನ ಅನಲ್ಪವಾದ ಸುಖ. ಜೀವರಸವು ಕ್ಷಣಿಕವಾದುದು, ದೇವರಸವು

ಶಾಶ್ವತವಾದುದು. ಜೀವ ರಸಾಸ್ವಾದವು ಶೃಂಗಾರದಲ್ಲಿ ಸಿಲುಕುವಂತಹದು, ದೇವ ರಸಾಸ್ವಾದವು ಭಕ್ತಿಯಲ್ಲಿ ಲಭ್ಯವಾಗುವಂತಹದು. ಶೃಂಗಾರರಸವು ಸರ್ವಸಾಮಾನ್ಯರ ಸೊತ್ತು, ಭಕ್ತಿರಸವು ಋಷಿಕವಿಗೆ ಮಾತ್ರ ಸಿಕ್ಕುವಂತಹದು. ಅಕ್ಕನು ಆ ಭಕ್ತಿಯಲ್ಲಿ ಹಾಡಿದಳು, ಆ ದೇವನಲ್ಲಿ ಕೂಡಿದಳು.

> "ಎನ್ನ ಮನವ ಮಾರುಗೊಂಡನವ್ವಾ! ಎನ್ನ ತನುವ ಸೂರೆಗೊಂಡನವ್ವಾ! ಎನ್ನ ಸುಖವನಪ್ಪಗೊಂಡನವ್ವಾ! ಎನ್ನಿರವ ನಿಂಬುಗೊಂಡನವ್ವಾ! ಚೆನ್ನಮಲ್ಲಿಕಾರ್ಜುನನ ಒಲುಮೆಯ ಮಳಾನು"

ಹೀಗೆ ಸಾಯದ ಕೆಡದ ಚಲುವ ಗಂಡನೊಲುಮೆಯವಳಾಗಿ ಮಾತಾಡಿದ ಮಾತುಗಳು ಯಾರ ಹೃದಯವನ್ನು ತಟ್ಟಲಿಕ್ಕಿಲ್ಲ, ಮುಟ್ಟಲಿಕ್ಕಿಲ್ಲ, ಮುಟ್ಟಿ ಮಾರ್ಪಡಿಸಲಿಕ್ಕಿಲ್ಲ? **ಅವಳ ಹೃದಯವು ಪಕ್ವವಾದಂತೆ ಅವಳ ನುಡಿಯೂ ಹದಗೊಂಡಿತ್ತು.** ಅಂತೆಯೇ ಅವಳ ನಡೆಯು ಎಲ್ಲರ ಮನಸ್ಸನ್ನು ಸಂತೋಷಗೊಳಿಸುವಂತೆ, ಅವಳ ನುಡಿಯೂ ಎಲ್ಲರ ಕರ್ಣಗಳನ್ನು ತಣಿಸುತ್ತದೆ, ತನ್ನತ್ತ ಸೆಳೆಯುತ್ತದೆ. ಅವಳ ವಚನಗಳನ್ನು ಓದಿದಷ್ಟೂ ಆನಂದ, ಸಂತೋಷ. ಅವನ್ನು ಮತ್ತೂ ಮತ್ತೂ ಓದಬೇಕೆಂಬ ಆಶೆಯು ಬಲವಾಗುತ್ತದೆಯೇ ಹೊರತು ತೃಪ್ತಿಯಿಲ್ಲ. ಅವಳ ವಚನವು ಬೆಲ್ಲದ ಅಚ್ಚು, ಅಮೃತದ ಫಲ.

ಅಕ್ಕನದು ಕೇವಲ ಕವಿವಾಣಿಯಲ್ಲ, ಕಾವ್ಯಮಯ ಜೀವನ. ಅವಳು ಕೇವಲ ಕಾವ್ಯಕಾರಿಣಿಯಲ್ಲ, ಕಾವ್ಯ ಕರ್ತೃವೂ ಆಗಿದ್ದಾಳೆ. ಕೇವಲ ಕಾವ್ಯವನ್ನು ಕಟ್ಟುವ ಕವಿಯು ಜನಾಂಗದ ಜೀವನಕ್ಕೆ ಆದರ್ಶನಾಗನು, ಕಾವ್ಯಪ್ರಪಂಚದಲ್ಲಿ ಮಾತ್ರ ಆದರ್ಶನು. ಅಕ್ಕನು ಮಾತ್ರ ಎರಡರಲ್ಲಿಯೂ ಆದರ್ಶಳಾಗಿದ್ದಾಳೆಂಬುದು ಹೆಮ್ಮೆಯ ವಿಷಯ. ಅದರಲ್ಲಿಯೂ ಸ್ತ್ರೀಯರಿಗೆ. ಆದುದರಿಂದ ಅಕ್ಕನದು ಬರೀ ಕವಿವಾಣಿಯಲ್ಲ, ಕಾವ್ಯಜೀವನ. ಆದುದರಿಂದಲೇ ಚೆನ್ನಬಸವಣ್ಣನಂತಹ ಮಹಾ

ಜ್ಞಾನಿಯು-"ಅಜಕೋಟಿ ವರುಷದವರೆಲ್ಲರು ಹಿರಿಯರೇ?" "ಆಪ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ." ಎಂಬ ಈ ಎರಡು ವಚನಗಳಿಂದ ಅಕ್ಕನ ಬಾಳು-ಬಟ್ಟೆ-ಭಾಷೆಗಳ ಹಿರಿಮೆಯನ್ನು ಹಾಡಿಕೊಂಡಿದ್ದಾನೆ. ಇವಕ್ಕಿಂತಲೂ ಹೆಚ್ಚು ನಾನೇನೂ ಹೇಳಲಾರೆ, ಹೇಳುವದಿಲ್ಲ.

---

# ಅಕ್ಕನ ಉಳಿವು.

ಅಕ್ಕನು ಎಂದೆಂದಿಗೂ ಬಿಡದಿರುವ ಬಾಳಿಗಾಗಿ, ವಿಷಯಗಳನ್ನು ತೊರೆದು ವಿರತಿಯನ್ನು ಮರೆಹೊಕ್ಕಳು. ರಕ್ತಸಂಬಂಧವನ್ನು ಬಿಟ್ಟು, ಭಕ್ತಸಂಬಂಧವನ್ನು ಇಟ್ಟುಕೊಂಡಳು. ಕೆಡುವ ಗಂಡರ ತೊಡೆದು, ಕೆಡದ ಗಂಡನ ಕೈಹಿಡಿದಳು. ನಶ್ವರವಾದ ದೇಹ ಮೋಹವನ್ನು ಕಿತ್ತು ಶಾಶ್ವತನಾದ ಚನ್ನಮಲ್ಲಿಕಾರ್ಜುನನಲ್ಲಿ ನಿರ್ಮಳವಾದ ನೇಹವನ್ನಿತ್ತಳು. ಅಚ್ಚಳಿಯದ ಬಾಳಿನಲ್ಲಿ ಬದುಕಿದಳು. ಅಕ್ಕನ ಆ ಬಾಳು ಕೀಳು ಬಾಳಲ್ಲ, ಉಚ್ಚ ಬಾಳು. ಹಾಳು ಬಾಳಲ್ಲ, ನಿಚ್ಚ ಬಾಳು.

ಆ ಬಾಳಿನಲ್ಲಿ ಬದುಕಬೇಕಾದರೆ ಮೊದಲಿಗೆ ಹೇಳಿದಂತೆ ತನ್ನ ತನವನ್ನು ಅರಿಯಲು ಅಳವಡಿಸಿಕೊಳ್ಳಲು ಹೆಣಗಬೇಕು. ಅದಿಲ್ಲದೆ ಆ ಬಾಳು ಸಾಧ್ಯವಿಲ್ಲ. ತನ್ನ ತಾನರಿಯದಿದ್ದರೆ ನಿಜಸುಖವೆಂಬುದೆಲ್ಲಿ? ತೆರೆಯಿಲ್ಲದ ತೊರೆಯಂತಿಲ್ಲದಿದ್ದರೆ ಶಾಂತಿ-ಸಮಾಧಾನಗಳು ಸಿಕ್ಕುವವೆ? ಹೊರಗಿನ ರೂಪು-ರುಚಿಗಳಿಗೆ ಮನವು ಸೋತರೆ, ಗಂಧ-ಶಬ್ದಗಳಿಗೆ ಮನವು ಹರಿದರೆ, ವಿಷಯದ ಸೋಂಕಿಗೆ ಮೈನೂಂಕಿದರೆ ಚಿತ್ತ ಸ್ಥೈರ್ಯವು ಅದೆಂದಿಗೂ ಉಂಟಾಗದು. ಚಿತ್ತವು ನಿಶ್ಚಂಚಲವಾಗದಿ

ದ್ದರೆ ಅಜ್ಞಾನಾವರಣವಿಲ್ಲದ ಅನುಭವವು ಕನ್ನಡಿಯ ಗಂಟಾಗುವದು. ಲಿಂಗಸುಖ, ಲಿಂಗಕಳೆಗಳು ಗಗನಕುಸುಮದಂತೆ ಪರಿಣಮಿಸುವವು. ಕಲುಷ ಕರ್ಮಿಗೆ ಕೈಲಾಸದ ಸಿರಿ ಸೊಬಗು ಸಿಕ್ಕುವವೆ? ಜಡಬುದ್ಧಿ, ಜನಸಂಗ, ಜಗನ್ಮೋಹವುಳ್ಳವನಿಗೆ ಆ ನಿಜ ನಿಲವು ಕೈವಶವಾಗುವುದೆ? ತರ್ಕ, ಅಭಿಮಾನ, ವಿಷಯಾಸಕ್ತಿ, ಚಿತ್ತಚಾಪಲ್ಯವುಳ್ಳವರಿಗೆ ಚನ್ನ ಮಲ್ಲಿಕಾರ್ಜುನನು ಗೋಚರನಾಗುವನೆ? ವೇದ ವಾಕ್ಯಗಳನ್ನು ನಂಬಿ, ಜಾತಿಸೂತಕಗಳು ನಿಜವೆಂದು ವಾದಿಸಿ ಭೇದವನೆಣಿಸುವವರಿಗೆ ಆ ಚನ್ನಮಲ್ಲಿಕಾರ್ಜುನನ ಕೈವಿಡಿದು ಬಾಳುವ ಭಾಗ್ಯವು ಎಂದಾದರೂ ಬರಬಹುದೆ? ಆಗದು. ಅಕ್ಕನು ಅವೆಲ್ಲವನ್ನು ಮೀರಿ ಮಲ್ಲಿಕಾರ್ಜುನನಲ್ಲಿ ತಲ್ಲೀನನಾದಳು. ಎಂದೆಂದಿಗೂ ಅಳಿಯುವ ಆತನ ಕೈವಿಡಿದು ತಾನು ಎಂದೆಂದಿಗೂ ಉಳಿದಳು. ಬರೀ ಆತನಲ್ಲಿಯೇ ಅಲ್ಲ, ಎಲ್ಲ **ಕನ್ನಡಿಗರ ಹೃದಯದಲ್ಲಿಯೂ ಉಳಿದಳು,** ಉಳಿಯುವಳು ಅವಳು ಪಂಡಿತರ-ಪಾಮರರ ಸ್ತ್ರೀಯರ-ಪುರುಷರ, ಸಮಸ್ತರ ಹೃನ್ಮಂದಿರಗಳನ್ನು ಎಂದೆಂದಿಗೂ ಬಿಡದ ತನ್ನ ಬಾಳಿನ ಬೆಳಕಿನಿಂದ ಬೆಳಗಿದಳು ಆ ಬೆಳಗಿನಲ್ಲಿಯೇ ನಾವಿಂದು ಬಾಳಬೇಕು, ಬೆಳಕಿಗೆ ಬರಬೇಕು. ಅವಳ ಆ ಬಾಳಿನ ನಡೆ-ನುಡಿಗಳೇ ನಮಗೆ ಇಂದಿನ ಮುಂದಿನ ಜೀವನದ ಪಲ್ಲವಿ. ಆ ಪಲ್ಲವಿಯೊಡನೆ ನಮ್ಮ ಹೃದಯ ವೀಣೆಯ ತಂತಿಯನ್ನು ಮಿಡಿದು—

"ದೇವಿಯ ಮಾತೆ ಮಾತು ಮಹದೇವಿಯ ನಿರ್ಮಲ ರೂಪು ರೂಪುಕೇಳ್।
ದೇವಿಯ ರೀತಿ ರೀತಿ ಮಹದೇವಿಯ ಬಂಧುರ ಕೀರ್ತಿ ಕೀರ್ತಿ ಮೇಣ್।
ದೇವಿಯ ಬಟ್ಟೆ ಬಟ್ಟೆ ಮಹದೇವಿಯ ಬಿಂಕದ ಭಾಷೆ ಭಾಷೆ ಪೋ।
ದೇವಿಯ ನಿಷ್ಠೆ ನಿಷ್ಠೆ ಮಹದೇವಿಯ ಬಾಳುವೆ ಬಾಳು ವುರ್ವಿಯೊಳ್॥

ಎಂದು ಹರಿಹರದೇವನೊಡನೆ ದನಿಗೂಡಿ, ಹಾಡಿ ಹರುಷಗೊಳ್ಳಬೇಕು.

ಮುಗಿದುದು.

# — ಶ್ರೀಶೈಲ ಸನ್ನಿಧಿಯವರ ಗ್ರಂಥಗಳು —

| | | | | |
|---|---|---|---|---|
| ೧ | ವಚನಗಳು: | | | |
| | ವಚನಾಂಜಲಿ | ೧ | ೮ | ೦ |
| | ವಚನಮಂಜರಿ | ೧ | ೮ | ೦ |
| ೨ | ಸಮೀಕ್ಷಾತ್ಮಕ ಸಾಹಿತ್ಯ: | | | |
| | ಅಕ್ಕನ ಅಚ್ಚು ಬಾಳು | ೧ | ೦ | ೦ |
| | ಅಣ್ಣನ ಬದುಕು | ೨ | ೮ | ೦ |
| | ಅಲ್ಲಯ್ಯನ ಬೆಳಕು | ೧ | ೮ | ೦ |
| | ಸುಜ್ಞಾನಿ ಚನ್ನಬಸವಣ್ಣ | ೦ | ೧೨ | ೦ |
| ೩ | ನಾಟಕಗಳು: | | | |
| | ಗುರುವಿನ ಗೆಲವು | ೦ | ೧೨ | ೦ |
| | ಆಯ್ದಕ್ಕಿ ಮಾರಯ್ಯಾ | ೦ | ೧೨ | ೦ |
| ೪ | ಚರಿತ್ರೆಗಳು: | | | |
| | ಕಾರಣಿಕ ಕುಮಾರಯೋಗಿ | ೨ | ೦ | ೦ |
| | ಯೋಗಿರಾಜ ಪ್ರಭುಕುಮಾರ ಪಟ್ಟಾಧ್ಯಕ್ಷರು | | | |
| | ಕರಿಬಸವೇಂದ್ರರ ಬಸಗೆ | ೦ | ೧ | ೬ |
| | ದೇವದಾಸಿಮಯ್ಯ (ಅಚ್ಚಿನಲ್ಲಿದೆ) | | | |
| ೫ | ಕವನಗಳು: | | | |
| | ಹೊನ್ನ ಹಕ್ಕಿ | ೧ | ೪ | ೦ |
| | ರನ್ನ ಚುಕ್ಕಿ (ಅಚ್ಚಿನಲ್ಲಿ) | | | |
| ೬ | ಪ್ರಬಂಧಗಳು: | | | |
| | ಸೀಳ್ನುಡಿ | ೦ | ೧೨ | ೦ |
| | ಯೋಗಕ್ಷೇಮ (ಅಚ್ಚಿನಲ್ಲಿದೆ) | | | |
| | ನಾನು ನೀನು | ೦ | ೪ | ೦ |
| | ಕಾಯಿ ಹಣ್ಣು | ೧ | ೬ | ೦ |
| | ಹೆಮ್ಮೆಗಳು | ೦ | ೧೦ | ೦ |
| | ಮುಪ್ಪಿನಾರ್ಯರ ಭಾವಪಾತ್ರಗಳು | ೦ | ೧೨ | ೦ |

೭ ಸಂಗ್ರಹ ಗ್ರಂಥಗಳು:

| | | | |
|---|---|---|---|
| ಯೋಗಾಂಗ ತ್ರಿಸಿಧಿ | ೦ | ೨ | ೦ |
| ಮಹದೇವಿಯಮ್ಮನ ವಚನಗಳು | ೦ | ೧ | ೬ |

೮ ಅನುವಾದ ಗ್ರಂಥ:

| | | | |
|---|---|---|---|
| ಮಣಿಕಾಂತಿ | ೨ | ೦ | ೦ |

೯ ಲಾವಣಿ:

| | | | |
|---|---|---|---|
| ಅಕ್ಕನ ಲಾವಣಿ | ೦ | ೨ | ೦ |

ದೊರೆಯುವ ಸ್ಥಳ:

**ಜ. ನಿ. ಪುಸ್ತಕ ಭಂಡಾರ, ನಂ. ೪೯.**

ಹೆಚ್. ಬಿ. ಸಮಾಜಾ ರೋಡ,

**ಬೆಂಗಳೂರು. ೪.**



# ಸನ್ನಿಧಿಯ ಗ್ರಂಥಭಂಡಾರದಲ್ಲಿ ದೊರೆಯುವ
# ಇತರ ಗ್ರಂಥಗಳು

| | | | | |
|---|---|---|---|---|
| ೧ | ಶ್ರೀ ನಿಡುಮಾಮಿಡಿ ಸನ್ನಿಧಿಯವರು<br>(ಅ. ನ. ಕೃ. ಕೃತ) | ೨ | ೦ | ೦ |
| ೨ | ಶ್ರೀ ಶೈಲ ಪಂಡಿತಾರಾಧ್ಯ ಮೂಲಪೀಠವು<br>(ಜಿ. ಟಿ. ಅಕ್ಕೂಲಯ್ಯ ದೀಕ್ಷಿತರ ಕೃತ) | | | |
| ೩ | ಸಂಸ್ಥಾನದ ಸಂಕ್ಷಿಪ್ತ ಚರಿತ್ರೆ | | | |
| ೪ | ಸನ್ನಿಧಿಯ ಲಾವಣಿ | | | |

---

# ಸನ್ಮಾರ್ಗ ಗ್ರಂಥ ಭಂಡಾರದಲ್ಲಿ ದೊರೆಯುತಕ್ಕ
# ಗ್ರಂಥಗಳು.

— ಇದರ ವಡಿಯರು —

**ತ್ಯಾಗವೀರ ಶಿ. ಶಿ. ಚಿತ್ತರಗಿ ಡಿ.ಸಿ.ಸಿ. ಬ್ಯಾಂಕ ಲಿ. ವಿಜಾಪೂರ.**

| | ಗ್ರಂಥಗಳ ಹೆಸರು | ಗ್ರಂಥಕರ್ತರು | ಬೆಲೆ | | |
|---|---|---|---|---|---|
| ೧ | ಮಣಿಕಾಂತಿ | ಶ್ರೀ ಜ.ಪ.ಚ. ನಿಡುಮಾಮಿಡಿ ಶಿವಾಚಾರ್ಯರು. | ೨ | ೦ | ೦ |
| ೨ | ಸಮ್ಯಜ್ಞಾನಿ ಚನ್ನಬಸವಣ್ಣ | ,, | ೦ | ೧೨ | ೦ |
| ೩ | ಆಯದಕ್ಕಿ ಮಾರಯ್ಯ<br>(ಏಕಾಂಕ ನಾಟಕ) | ,, | ೦ | ೧೨ | ೦ |
| ೪ | ಅಕ್ಕನ ಆಚ್ಚ ಬಾಳು | ,, | ೧ | ೦ | ೮ |

[ The Sakroji Printing Works, Bagalkot. ]